# ಮುನ್ನುಡಿ

'ಚಾರಿತ್ರಹೀನ' ಎಂದೆನಿಸಿಕೊಳ್ಳುವವರನ್ನು ನೋಡಿದಾಗಲೆಲ್ಲ 'Men Sacrifice everything to ambition, women to love' ಎಂದು ಮೇರಿ ಕೋರೆಲ್ಲಿಯು ಹೇಳಿರುವುದು, ಅಕ್ಷರಶಃ ದಿಟವೆನಿಸ ದಿರದು. ಅವರ ಆ ನಿಸ್ವಾರ್ಥ ಪ್ರೇಮಕ್ಕೆ ನಮ್ಮಿಂದ ದೊರೆಯುತ್ತಿರುವ ಆದರವೆಂತಹುದು?

ಮೋಹಪರವಶರಾದ ಪುರುಷರು, ನಿಷ್ಕಲ್ಮಷ ಮನಸ್ಸಿನ ಯುವತಿಯರನ್ನು ಮೋಸಗೊಳಿಸಿ, ತಮ್ಮ ಪಾಶವ ಇಚ್ಛೆಯು ಪೂರ್ಣವಾಗುತ್ತಲೂ, ತಮಗೆ ಸರ್ವಸ್ವವನ್ನೂ ಒಪ್ಪಿಸಿದ ಆ ಸ್ತ್ರೀಯರ ಕೈ ಬಿಟ್ಟು ಅವರ ಜೀವನವನ್ನೇ ಹಾಳುಮಾಡುವುದರೊಂದಿಗೆ, ಅವರನ್ನು ಚಾರಿತ್ರಹೀನೆಯರೆಂದು ತಾವೇ ಹಳಿಯುತ್ತ ಹೋಗುವರು. ಆ ಬಡಪಾಯಿಗಳು ಅನಂತರ ಅಪಮಾನ, ದಾರಿದ್ರ್ಯ, ರೋಗ, ಕಷ್ಟ, ಹಿಂಸೆಗಳಿಗೆ ಬಲಿಯಾಗಿ, ಜೀವಿತದ ಹೆಣಗಾಟದಲ್ಲಿ ಹತಾಶರಾಗಿ ಕೊನೆಗೆ ಜೀವನವು ನರಕ – ಸಾವೇ ಸ್ವರ್ಗವೆಂದು ಮೃತ್ಯುವನ್ನಪ್ಪಿದರೆ, ಆಗಲೂ ಅವರ ಆ ದುರ್ದೆಶೆಗೆ ಕಾರಣರಾದ, ಸದ್ಗುಣದ ಭಾಂಡಾರದಂತೆ ಮೆರೆಯುವ ಆ ಸಜ್ಜನರ ನಾಲಿಗೆಯು ಸುಮ್ಮನಿರದು. ದೋಷಿಗಳೆಂದು ಇತರರನ್ನು ದೂರುವವರು ತಾವು ನಿರ್ದೋಷಿಗಳೆ?

ಈ ಸಂಗ್ರಹದಲ್ಲಿನ ೧, ೨, ಮತ್ತು ನಾಲ್ಕನೇಯ ನಾಟಕಗಳನ್ನು ನಿರ್ಭಾಗ್ಯ – "ಚಾರಿತ್ರಹೀನೆ"ಯರ ಪರವಾಗಿ ಓದುಗರಿಗೆ ಒಪ್ಪಿಸಿದ್ದೇನೆ. ಅವುಗಳ ಬಗ್ಗೆ ನಾನು ಹೆಚ್ಚಿಗೆ ಏನನ್ನೂ ಹೇಳದೆ, ಕೇವಲ ನಿತ್ಯಜೀವನದ ಸತ್ಯ ವಿಚಾರವನ್ನು ಅವುಗಳಲ್ಲಿ ಕೊಟ್ಟಿರುವೆನೆಂದು ಮಾತ್ರ ಹೇಳಿ, ಲಾರ್ಡ್ ಬೇಕನ್ನಿನ ವಾಕ್ಯವೊಂದನ್ನು ಮುಂದಿಟ್ಟಲ್ಲಿ ನನ್ನ ಮುನ್ನುಡಿ ಮುಗಿಯಿತೆಂದಾಯ್ತು.

> 'Read not to contradict and confute, nor to believe and take for granted, nor to find talk and discourse, but to weigh and consider'.

71/4—1, 5ನೆ ರಸ್ತೆ,
ಚಾಮರಾಜಪೇಟೆ,
ಬೆಂಗಳೂರು ಸಿಟಿ.

ಬಿ. ಎಸ್. ವೆಂಕಟರಾಮ್.

# ಪರಿವಿಡಿ



ವಿ. ಸೂ:—ಮೊದಲಿನೆರಡು ನಾಟಕಗಳು ಏಕಾಂಕ ನಾಟಕವೆಂದು ಅಚ್ಚಾಗಿದೆ.
ಅವು ಏಕಾಂಕವಲ್ಲ.
ಅನಾಥೆಯ ಅಂತ್ಯದಲ್ಲಿ ಕೊಟ್ಟಿರುವ ಗೀತೆಯು ಪೂಜ್ಯ 'ಶ್ರೀ'ಗಳವರ 'ದುಃಖಸೇತು' ಎಂಬ ಗೀತೆಯಿಂದ ಉದ್ಧೃತವಾದುದು.

# ಮಕ್ಕಳಿವರೇನಮ್ಮ....?



## ಏಕಾಂಕ ನಾಟಕ

### ದೃಶ್ಯ ೧

[ಒಂದು ಬಡವರ ಮನೆಯ ಮುಂಭಾಗ. ಜೀರ್ಣ ವಸ್ತ್ರಗಳನ್ನುಟ್ಟಿರುವ ಲಲಿತಮ್ಮ - ಮತ್ತು ಆಕೆಯ ಮಗು ಇಬ್ಬರೂ ತಮ್ಮ ಆ ಮನೆಯ ಬಾಗಿಲನ್ನು ನೋಡುತ್ತ ನಿಂತಿದ್ದಾರೆ. ಮನೆಯ ಮಾಲೀಕನು ಬಾಗಿಲಿಗೆ ಬೀಗ ಹಾಕಿಕೊಂಡು ಬಂದು "ಬಾಡಿಗೆಗ್ಗೆ ದೊರೆಯುತ್ತೆ" ಎಂಬ ತಗಡನ್ನು ತೂಗುಹಾಕಿ ಹೋಗುತ್ತಾನೆ. ಲಲಿತಮ್ಮನು ಅದನ್ನೆಲ್ಲಾ ಕಣ್ಣೀರು ಹಾಕಿ ನೋಡುತ್ತ ಅವನು ಮರೆಯಾಗುವವರೆಗೂ ಅವನನ್ನೇ ನೋಡುವಳು. ನಂತರ]

ಲಲಿತಮ್ಮ—'ಆಯಿತು. ಬಿಸಿಲು-ಮಳೆಗಳಿಗೆ ಮರೆಯಾಗಿದ್ದ ಗೂಡೂ ಹೋಯಿತು. ದೇವರಿಗಿನ್ನೂ ದಯೆ ಬರಲಿಲ್ಲ.'

[ಎಂದು ಆಕಾಶವನ್ನೇ ದಿಟ್ಟಿಸಿ ನೋಡುತ್ತ ನೆಲದಮೇಲೆ ಕೂಡುವಳು. ಮಗನು ನೋಡಿ ಬೇಸತ್ತು]

ಮಗ—'ಅಮ್ಮಾ ನನಗೆ ಹಸಿವು. ಏನಾದರೂ ಕೊಡಮ್ಮಾ' (ಎಂದಳುವನು. ಅವನನ್ನು ತೊಡೆಯ ಮೇಲೆ ತಾಯಿಯು ಮಲಗಿಸಿಕ್ಕೊಂಡು ತಲೆ ಸವರುತ್ತ........)

ಲಲಿ—'ತಾಳು ಮಗೂ-ಅವರು ಪೇಟೆಗೆ ಹೋಗಿದ್ದಾರೆ. ಏನಾದರೂ ಕೆಲಸ ಸಿಕ್ಕಿರಬಹುದು. ಬರುವಾಗ ಹಾಗೇ ತಿಂಡಿ ತರುತ್ತಾರೆ-ಅಳಬೇಡಮ್ಮಾ'

ಮಗ— (ಅಳುತ್ತಲೇ) 'ಸುಳ್ಳು ಹೇಳ್ತೀ - ಅಪ್ಪ ಮನೆಗೆ ಬಂದಾಗೆಲ್ಲಾ ಹಾಗೇ ಬಂದು - ಮರತ್ಬಿಟ್ಟೇಂತ ಹೇಳ್ತಾ ನೆ-ನಂಗೆ ಹಸಿವು - ಈಗಲೇ ಕೊಡಮ್ಮ—'

ಲಲಿ—'ದೇವರೇ— ಬಡವರಿಗೆ ಹೊಟ್ಟೆಯೇಕೆ ಕೊಟ್ಟೆ. ಮನೆಯಲ್ಲಿ ಇದ್ದುದೆಲ್ಲವೂ ಮಾರಿಯಾಯ್ತು. ಎರಡು ದಿನಗಳಿಂದ ಮಕ್ಕಳು ಹೊಟ್ಟೆಗಿಲ್ಲದೆ ನರಳುತ್ತಿವೆ. ಒಂದು ಬಾರಿ ನಮ್ಮ ಕಡೆ ನೋಡು-ಲೋಹ, ಕಲ್ಲುಗಳಲ್ಲಿ ನಿನ್ನನ್ನು ಮಾಡಿ ಪೂಜಿಸುವುದು ನಿನಗೆ ಪೂರ್ಣ ಒಪ್ಪು ವುದು. ನಿನ್ನ ಹೃದಯವೂ ಅದೇ ಲೋಹದಂತೆ, ಕಲ್ಲಿ ಂತೆನ ಕಠಿಣವಾಗಿದೆ. ಮಕ್ಕಳು ಹೊಟ್ಟೆಗಿಲ್ಲದೆ ಸಾಯು ತ್ತಿರಲು ಒಂದು ಹಿಡಿ ಅನ್ನಕೊಟ್ಟರೆ ನಿನ್ನ ಧನಭಂಡಾ ರವು ಕರಗಿಹೋಗುವುದೇ ?"

ಮಗ—'ಅಮ್ಮಾ - ಹಸಿವು '

ಲಲಿ—'ಮಗೂ-ಮಾರಲು ಏನೂ ಉಳಿದಿಲ್ಲ. ಇದ್ದುದೆ ಲ್ಲವೂ ಹೋಯ್ತು. ಈಗ ನಿನ್ನ ಕೈ ಹಿಡಿದು ಬೀದಿ ಬೀದಿ ತಿರುಗುತ್ತ ಭಿಕ್ಷೆ ಬೇಡುವುದೊಂದು ಉಳಿದಿದೆ. ಇನ್ನು ಸ್ವಲ್ಪ ಹೊತ್ತು-ಅವರೇನೂ ತರದೆ ಬಂದರೆ ಆಮೇಲೆ ಅದೂ ಮಾಡುತ್ತೇನೆ'

[ಲಲಿತಮ್ಮನ ಮಗಳು ಮಡಿಲಲ್ಲಿ ಸೊಪ್ಪು ತುಂಬಿಕೊಂಡು ಓಡಿ ಬಂದು ತಮ್ಮನ ಮುಂದೆ ಹಿಡಿದು]

ಮಗಳು—"ತಮ್ಮಾ-ಇಲ್ಲಿ ನೋಡು, ತಿನ್ನಲು ತಂದಿದ್ದೇನೆ. ಬಾ ಎಲ್ಲರೂ ಇದನ್ನು ತಿನ್ನೋಣ.'

ಲಲಿತ—'(ನೋಡಿ) ಮಗೂ- ಇದು ಮನುಷ್ಯರು ತಿನ್ನುವ ತಿಂಡಿಯಲ್ಲ. - ಮೃಗಗಳು ತಿನ್ನುವ ಸೊಪ್ಪು. ನಾವು ತಿನ್ನುವುದಕ್ಕಾಗುವುದಿಲ್ಲ.' (ಕಿತ್ತುಕೊಳ್ಳುವಳು.)

ಮಗಳು—'ಏಕಾಗುವುದಿಲ್ಲ?'

ಲಲಿತ—'ಏಕೇಂತ ಹೇಳಲಿ.... ..........ಬಹುಶಃ ನಮ್ಮ ಮೈಗದು ಒಂಟದೇನೊ..........'

ಮಗಳು—'(ಕಿತ್ತು ತೆಗೆದುಕೊಂಡು) ಇಲ್ಲಾ - ನನಗೆ ಹಸಿವು ನಾನು ಇದನ್ನೇ ತಿನ್ನುತ್ತೇನೆ.'...........

[ ಎಂದು ತಿನ್ನಲು ಹೋಗುವಳು. ತಾಯಿ ಕಿತ್ತು ಬಿಸುಟು, ದುಃಖ—ಕೋಪದಿಂದ ಆಕಾಶದ ಕಡೆ ನೋಡುತ್ತ]

ಲಲಿ—'ಕೇಳಿಸಿತೆ?— ನಿದ್ದೆಯಿಂದ ಇನ್ನೂ ಎಚ್ಚರವಾಗದೆ? ನಿನ್ನ ಸೃಷ್ಟಿಯ ಮಕ್ಕಳು ಹೊಟ್ಟೆಗಿಲ್ಲದೆ ಮೃಗಗಳಂತೆ ಹುಲ್ಲು-ಸೊಪ್ಪನ್ನಾದರೂ ತಿನ್ನುವೆವೆಂದಿರುವ ಹೊತ್ತು ಬಂದಿದೆ. ಇನ್ನು ದುಷ್ಟಜಂತುಗಳಂತೆ ಒಬ್ಬರನ್ನೊಬ್ಬರು ಕೊಂದು ತಿನ್ನುವ ವೇಳೆಗೆ ಎಚ್ಚರಗೊಳ್ಳುವೆಯಾ?

[ಶಾಮರಾಯನು ಕೈಲೊಂದು ಹಣದಚೀಲವನ್ನು ಹಿಡಿದು ಓಡಿಬರುವನು. ಬಂದವನು ಆತುರದಿಂದ ಮನೆಗೆ ನುಗ್ಗಿ ಹೋಗಿ ಬಾಗಿಲು ಮುಚ್ಚಿದ್ದುದನ್ನು ಕಂಡು ದಿಕ್ಕು ತೋರದೆ ತಿರುಗುವಷ್ಟರಲ್ಲಿ ಲಲಿತಮ್ಮನು ಬಳಿಗೆ ಬಂದು]

ಲಲಿತಮ್ಮ—'ಇದೇನು? ಹೀಗೆ ಓಡಿ ಬಂದಿರಿ. ಕೈಲೇನು?

ಶಾಮ—"ಆಮೇಲೆ ಹೇಳುತ್ತೇನೆ—ಈಗ ಮೊದಲು ತೆಗೆದುಕೋ-ಹುಡುಗರಿಗೆ ತಿನ್ನಲೇನಾದರೂ ತಂದು ಕೊಡು ನಾನಾಮೇಲೆ ಬರುತ್ತೇನೆ. ಇಲ್ಲಿಯೇ ಇರಿ.'

[ಎಂದು ಹೇಳುವನು. ದೂರದಲ್ಲಿ "ಹಿಡಿ-ಹಿಡಿಯಿರಿ-ಕಳ್ಳ" ಎಂಬ ಕೂಗು ಕೇಳಿಬರುವುದು. ಶಾಮರಾಯನು ಕೇಳಿ ಓಡುವನು. ಹಿಂದೆಯೇ ಇಬ್ಬರು ಪೋಲೀಸಿನವರು ಓಡಿ ಹೋಗುವರು. ದೇಶಪಾಂಡೆಯು ಓಡುತ್ತ ಬರುವನು. ಪೋಲೀಸಿನವರು ಶಾಮರಾಯ

ನನ್ನು ಹಿಡಿದು ತರುವರು. ಲಲಿತಮ್ಮನು ದಿಕ್ಕುಕಾಣದೆ ಪತಿಯ ಮುಖ ನೋಡುವಳು. ಶಾಮರಾಯನು ತಲೆ ತಗ್ಗಿಸುವನು. ಪೋಲೀಸ್ ಕಾನ್‌ಸ್ಟೇಬಲನು ಶಾಮರಾಯನ ಕುತ್ತಿಗೆ ಹಿಡಿದು]

ಪೊ. ಕಾ.—"ಎಲ್ಲಿ ಹಣದ ಚೀಲವೆಲ್ಲಿ" [ಎಂದು ಗುದ್ದುವನು]

[ಲಲಿತಮ್ಮನಿಗೆ ಕ್ಷಣದಲ್ಲಿ ಎಲ್ಲವೂ ಹೊಳೆಯುವುದು. ಮುಖವು ವಿವರ್ಣವಾಗುವುದು. ಹಣದ ಚೀಲವನ್ನು ಮುಂದೆ ಮಾಡಿ]

ಲಲಿತಮ್ಮ—'ಅಯ್ಯಾ- ಇಲ್ಲಿದೆ ತೆಗೆದುಕೊಳ್ಳಿ. ಮಕ್ಕಳು ಉಪವಾಸದಿಂದ ಸಾಯುತ್ತಿದ್ದಾರೆಂದು ಅವರು ಈ ಹಣವನ್ನು ತಂದಿರಬಹುದು. ನಾನು ಹಿಂದಕ್ಕೆ ಕೊಡುತ್ತೇನೆ. ಅವರನ್ನು ಬಿಟ್ಟು ಬಿಡಿ.'

ಪೊ. ಕಾ.—"ಉಪವಾಸದಿಂದ ಸಾಯುತ್ತಿದ್ದರೆ ರಸ್ತೆಯಲ್ಲಿ ಹೋಗುತ್ತಿರುವವರ ಕೈಲಿರುವ ಹಣವನ್ನು ಕಿತ್ತುಕೊಂಡು ಓಡಬೇಕೋ? ಇಂಥ ಕಳ್ಳಮಕ್ಕಳು ಹೆಚ್ಚಿ ನಮಗೆ ವಿಶ್ರಾಂತಿಯೇ ಇಲ್ಲವಾಗಿದೆ.

(ಎಂದು ಲಲಿತಮ್ಮನ ಕೈಲಿದ್ದ ಹಣದ ಚೀಲವನ್ನು ಕಿತ್ತು ದೇಶಪಾಂಡೆಯ ಕೈಲಿಟ್ಟು)

'ನೋಡಿ ಸ್ವಾಮಿ—ಹಣ ಸರಿಯಾಗಿದೆಯೇನೋ?' ಇವನನ್ನು ಠಾಣೆಗೆ ಒಯ್ದು ಅಲ್ಲಿ ಕೂಡುತ್ತೇನೆ. ಹೊತ್ತಾಯಿತು......ನೀವೂ ಬರಬೇಕು'

[ಎನ್ನುವನು. ದೇಶಪಾಂಡೆಯು ಹಣವೆಣಿಸಿ "ಸರಿಯಾಗಿದೆ" ಎನ್ನುವನು. ಲಲಿತಮ್ಮನು ಆವನ ಕಾಲಮೇಲೆ ಬಿದ್ದು ಕಣ್ಣೀರಿಡುತ್ತ]

ಲಲಿತಮ್ಮ—'ಅಪ್ಪಾ- ನಿಮ್ಮ ಹಣ ಬಂತು.
ದಯೆ ತೋರಿ............ ನೀವೂ ಮಕ್ಕಳೊಂದಿಗರು....
............ಈ ಮಕ್ಕಳ ಮೇಲೆ ಕೃಪೆ ಮಾಡಿ............

(ಪೋಲೀಸ್ ಕಾನ್‌ಸ್ಟೇಬಲ್ ಶಾಮರಾಯನನ್ನು ಎಳೆದೊಯ್ಯು ವನು. ಲಲಿತಮ್ಮನು ಅಳುತ್ತ ಮಕ್ಕಳೊಂದಿಗೆ ಅವರನ್ನು ಹಿಂಬಾಲಿಸಿ ಓಡುವಳು, ದೇಶಪಾಂಡೆಯೂ ಅನುಸರಿಸುವನು.)

## ದೃಶ್ಯ ೨

[ಬೀದಿ. ನಾಗರಿಕ ಶ್ರೀಮಂತರೊಬ್ಬರು ಕೈಬೆತ್ತವನ್ನು ಒಂದು ಕೈಯಲ್ಲಿ ಠೀವಿಯಿಂದ ತಿರುವುತ್ತ ಮತ್ತೊಂದು ಕೈಯಲ್ಲಿ ಒಂದು "ಸಿಗಾರ್" ಹಿಡಿದುಕೊಂಡು ಪ್ರವೇಶಿಸುವರು. ಮಲಿನವಾದುಡುಪಿನಿಂದ ಕೂಡಿದ ಲಲಿತಮ್ಮನು ಮಕ್ಕಳೊಡನೆ ಭಿಕ್ಷೆಬೇಡುತ್ತ ಬರುವಳು]

ಲಲಿತಮ್ಮ—(ದೈನ್ಯತೆಯಿಂದ) ಸ್ವಾಮಿ .......ಹೊಟ್ಟೆಗಿಲ್ಲದ ಭಿಕಾರಿಗಳು ನಾವು............ಭಿಕ್ಷೆ ಬೇಡಿ ಹೊಟ್ಟೆ ಹೊರೆಯಲೂ ಕಷ್ಟವಾಗಿದೆ............ಯಾರೂ ಕೈಎತ್ತಿ ದಾನ ನೀಡರು..........ತಾವಾದರೂ ಕೃಪೆಯಿಟ್ಟು ನಿರ್ಗತಿಕರಿಗೆ ಒಂದು ರೊಟ್ಟಿ ಕೊಳ್ಳಲು ಸಹಾಯ ಮಾಡಲಾರಿರಾ.... ದೇವರು ನಿಮಗೆ ಸಂಪತ್ತು.................

ಶ್ರೀಮಂತ—'ಛೆ! get away............(ತೊಲಗು)

(ಎಂದು ಅಸಹ್ಯದಿಂದ ಮುಂದುವರಿಯುವ ವೇಳೆಗೆ ಇಬ್ಬರು ದೇವಾಲಯದ ಧರ್ಮದರ್ಶಿಗಳು ಪ್ರವೇಶಿಸುವರು. ಬಂದು ನಮಸ್ಕರಿಸಿ)

ಒಬ್ಬಾತ— (ನಮ್ರತೆಯಿಂದ) ರಾಯರಲ್ಲಿಗೇ ಹೊರಟಿದ್ದೆವು ....ಇಲ್ಲೇ ಸಿಕ್ಕೋಣವಾಯ್ತು................

ಶ್ರೀಮಂತ—"ಏನು ಸಮಾಚಾರ?

ಎರಡನೆಯಾತ—(ದೇಶಾವ್ಹಾರದನಗೆ ಚೆಲ್ಲುತ್ತ) ........ಆ!.... ಮತ್ತೇನೂ ಇಲ್ಲ........ದೇವಾಲಯಕ್ಕೆ ಲೋಹದ ಕಳಶ

ವಿಡಿಸಲು ತಾವು ಸಹಾಯ ಮಾಡುವುದಾಗಿ ವಾಗ್ದಾನ ಮಾಡೋಣವಾಗಿತ್ತು....... ಆ ಸಂಬಂಧವಾಗಿ........

ಶ್ರೀಮಂತ—'Oh! Yes-Yes........I remember (ಹೌದು....ನೆನಪಿದೆ)........ಈಗಲೇ ಬೇಕೇನು?

ಒಬ್ಬಾತ— ........ಹೌದು ರಾಯರೆ!....ಈಗಲೇ ಸಾಧ್ಯವಾದರೆ ತುಂಬಾ ಉಪಕಾರ........ದೇವರ ಕಾರ್ಯ............ ನಿಲ್ಲಿಸೋದುಚಿತವಲ್ಲ........

ಶ್ರೀಮಂತ—It's alright............What is the amount? (ಸರಿ! ಮೊತ್ತವೆಷ್ಟು?)

ಎರಡನೆಯಾತ—........ಹೆಚ್ಚೇನೂ ಇಲ್ಲ. .......ದೊಡ್ಡ ಕಳಶವಾಗಬೇಕು.......ಎಲ್ಲಾ ಹತ್ತಿರ ಹತ್ತಿರ ಒಂದು ಸಾವಿರ ರೂ. ಆಗಬೇಕಾಗುತ್ತೆ........

ಶ್ರೀಮಂತ—(ಬಾಯಲ್ಲಿ ಚುಟ್ಟ ಕಚ್ಚಿಕೊಂಡು, ಚಿತ್ತವನ್ನು ಕಂಕುಳಿಗೇರಿಸಿ, ಕಿಸೆಯಿಂದ ಚೆಕ್ಕು ಬುಕ್ಕು ತೆಗೆದು ಭರ್ತಿಮಾಡಿ ಒಂದು ಹಾಳೆಹರಿದು ಅವರ ಕೈಗಿತ್ತು) ...Here you are ರಶೀತಿ ಕಳುಹಿಸಿ ಬಿಡಿ........ಆ! ....... ಈ ವಿಷಯ ಪೇಪರುಗಳಿಗೆಲ್ಲಾ ತಿಳಿಸುವಿರಿ ತಾನೆ?

ಒಬ್ಬಾತ—"ಆಹಾ!........ಈ ಕೂಡ್ಲೆ .... ಸಾವಕಾಶಮಾಡೋದುಂಟೆ ರಾಯ್ರೆ............ಇಂಥಾ ಉದಾರ ದಾನ ದೇವರ ಸೇವೆಗೇಂತ ಅಂದ ಮೇಲೆ ಪ್ರಪಂಚಕ್ಕೆಲ್ಲಾ ತಮ್ಮಂಥವರ ಪರಿಚಯ ಮಾಡಿಕೊಡದಿದ್ದರೆ ದೇವರು ಒಪ್ಪುವನೆ?........

ಇಬ್ಬರೂ—'ತುಂಬಾ ತೊಂದರೆ ಕೊಟ್ಟೆವು ರಾಯ್ರೆ........ ಕ್ಷಮಿಸಿ........ನಾವು ಬರೋಣವೆ?

ಶ್ರೀಮಂತ—"Oh! Yes........(ತಿರುಗಿ ಹೊರಡಲಗುನುವಾನನು. ಒಬ್ಬ ಆಂಗ್ಲೇಯ ಉಡುಪು ಧರಿಸಿರುವ ಕ್ರಿಶ್ಚಿಯನ್ ತರುಣಿಯು ಒಂದು ಕಾಗದದ ಹೂಗಳ ಬುಟ್ಟಿ ಹಿಡಿದು ಪ್ರವೇಶಿಸಿ)

ತರುಣಿ—"(ಹಸನ್ಮುಖಳಾಗಿ) ........Won't you buy a flower, please? It's the Armistice day ... ...The money goes to the Army Fund ... Won't you? (ಆರ್ಮಿಸ್ಟೈಸ್ ದಿನ. ಹಣವು ಸೈನ್ಯದ ನಿಧಿಗೆ ಹೋಗುವುದು. ಒಂದು ಹೂ ಕೊಳ್ಳಲಾರಿರಾ?)

(ಎಂದು ಒಂದು ಹೂವನ್ನು ಎತ್ತಿ ಮುಂದೆ ಹಿಡಿಯುವಳು)
ಶ್ರೀಮಂತನು ಕಿಸೆಯಿಂದ ಹಣದಚೀಲ ತೆಗೆದು ನಸುನಗುತ್ತ, ಬಿಚ್ಚಿ

ಶ್ರೀಮಂತ—'How much is it? (ಇದರ ಬೆಲೆಯೇನು?)

ತರುಣಿ–'You are rich. You can afford to pay a good round sum for a flower. (ನೀವು ಶ್ರೀಮಂತರು......... ಒಂದು ಹೂವಿಗೆ ಹೆಚ್ಚು ಬೆಲೆ ಕೊಡಲು ಚೈತನ್ಯವಿದೆ)

ಶ್ರೀಮಂತ—'Name it. (ಎಷ್ಟು ಹೇಳಿಬಿಡು)

ತರುಣಿ—"Shall I say ten rupees? (ಹತ್ತು ರೂ. ಹೇಳಬಹುದೇ? ಎನ್ನುತ್ತ ಹೂವನ್ನು ಅವನ ಕೋಟಿಗೆ ಸಿಗಿಸುವಳು.)

ಶ್ರೀಮಂತ—' (ಹತ್ತು ರೂಪಾಯಿ ನೋಟು ತೆಗೆದು ಕೊಡುತ್ತ) Does the fair Flower girl go with it? (ಹೂಮಾರುವವಳೂ ಅದರೊಂದಿಗೆ ಸೇರಿರುವಳೋ?)

ತರುಣಿ—'(ವಾರೆನೋಟ ಬೀರುತ್ತ) It will cost you

a lot more. (ಹಾಗಾದರೆ ನಿಮಗಿನ್ನೂ ಹೆಚ್ಚು ಖರ್ಚಾಗುವುದು)

ಶ್ರೀಮಂತ—'Don't you Worry (ಚಿಂತಿಸ ಬೇಡ) (ಎಂದು ಹಣದಚೀಲವನ್ನೇ ಅವಳ ಕೈಗಿತ್ತು ನಗುತ್ತ) Shall we move? (ಹೊರಡೋಣವೆ?)

ಲಲಿತಮ್ಮ—'ಸ್ವಾಮಿ!........ದೀನರು.... ಹೊಟ್ಟೆಗೆ ಅನ್ನ ಕೊಡಿ ಎಂದು ಕೇಳುತ್ತಿದ್ದೇವೆ.........

ಶ್ರೀಮಂತ—"Oh! These beggars are a nuisance........................come on, let's go. (ಓ! ಈ ಹಾಳು ಭಿಕ್ಷುಕರದೊಂದು ಪೀಡೆ. ........ಬಾ....... ಹೋಗೋಣ)

ತರುಣಿ—'Sure— (ಖಂಡಿತವಾಗಿ)—(ತೆರಳುವರು.)

[ಲಲಿತಮ್ಮನು ಅವರನ್ನೇ ನೋಡುತ್ತಾ ಕ್ಷಣಕಾಲ ಖಿನ್ನಳಾಗಿ, ನೀಲಗಗನವನ್ನೀಕ್ಷಿಸುತ್ತ ನಿಲ್ಲುವಳು]

## ದೃಶ್ಯ ೩

[ದೇವಾಲಯದ ಹೊರ ಆವರಣದ ಮಗ್ಗುಲಲ್ಲಿ ಒಂದು ಕಲ್ಲ ಮೇಲೆ ಲಲಿತಮ್ಮನು ಕಣ್ಣೀರಿಡುತ್ತಾ ಕುಳಿತಿದ್ದಾಳೆ. ಉಟ್ಟಿರುವ ವಸ್ತ್ರಗಳು ತೀರ ಜೀರ್ಣವಾಗುತ್ತ ಬಂದಿವೆ. ಮಕ್ಕಳು ಹಸಿವೆಂದು ಅಳುತ್ತಿವೆ. ಒಬ್ಬ ಹರಿದಾಸನು ಪ್ರವೇಶಿಸುತ್ತ]

"ಉದರ ವೈರಾಗ್ಯವಿದು! ನಮ್ಮ ಪದುಮನಾಭನಲಿ
ಲೇಶ ಭಕುತಿಯಿಲ್ಲ ||ಉದರ||

(ಎಂದು ಹಾಡಿಕೊಂಡು ಬರುವನು. ಒಬ್ಬ ವೇಶ್ಯೆಯು ಪೂಜೆ ಮುಗಿಸಿಕೊಂಡು ದೇವಾಲಯದಿಂದ ಹಿಂತಿರುಗುತ್ತಿದ್ದು ಎದುರು

ದಿಕ್ಕಿನಿಂದ ಬಂದ ದಾಸನ ಜೋಳಿಗೆಗೆ ತನ್ನ ತಟ್ಟೆಯಲ್ಲಿದ್ದ ಹಣ್ಣು-ಕಾಯನ್ನು ಹಾಕಿಬಿಡುವಳು. ಲಲಿತಮ್ಮನು ಮುಂದೆ ಬಂದು)

ಲಲಿತ—'ತಾಯಿ! ಈ ಮಕ್ಕಳು ಹಸಿದಿವೆ.........ದಯವಿಟ್ಟು ಸಹಾಯ ಮಾಡಲಾರಿರಾ?

ವೇಶ್ಯೆ—'(ಹುಡುಗಿಯ ಮುಖವನ್ನು ಕುತೂಹಲದಿಂದ ನೋಡಿ) ಏನು ಮಾಡಲಮ್ಮ? ತಟ್ಟೆಯಲ್ಲಿದ್ದುದನ್ನೆಲ್ಲ ಹರಿದಾಸರಿಗೊಪ್ಪಿಸಿ ಬಿಟ್ಟೆ. ಮುಂಚೆಯೇ ಕೇಳಿದ್ದರೆ........?

ಲಲಿತ—'ಹೋಗಲಿ ಬಿಡಿ, ತಾಯಿ.......... ನಮ್ಮ ದುರಾದೃಷ್ಟ........

ವೇಶ್ಯೆ—........'ನೀನು ಭಿಕ್ಷುಕಿ........ ಈ ಮಕ್ಕಳನ್ನು ಹೇಗೆ ಸಾಕಬಲ್ಲೆಯೆ....?

ಲಲಿತ—'ಊರ ಜನಗಳ ಔದಾರ್ಯ ಕಂಡೆನಮ್ಮ....ಇನ್ನು ........ಸಾಕಲಾರೆ ತಾಯಿ........

ವೇಶ್ಯೆ—'(ಹುಡುಗಿಯನ್ನು ಈಕ್ಷಿಸಿ .......ತನ್ನಲ್ಲಿ) ರೂಪವಿದೆ........... (ಎಂದುಕೊಂಡು) ಆ ಹುಡುಗಿಯನ್ನು ನನಗೆ ಕೊಟ್ಟುಬಿಡು........ನನ್ನ ಮಗಳಿಗಿಂತ ಚೆನ್ನಾಗಿ ಸಾಕಿಕೊಳ್ಳುತ್ತೇನೆ....

ಲಲಿತ—(ತನ್ನಲ್ಲಿ) ........ಕುರುಬನು ಕುರಿ ಸಾಕಿದಂತೆ....

ವೇಶ್ಯೆ—'ಏಕೆ ಮನಸ್ಸಿಲ್ಲವೇನೆ?

ಲಲಿತ—'(ಮನಸ್ಸು ಹೃದಯಗಳನ್ನು ಕಲ್ಲುಮಾಡಿ) ಇಬ್ಬರನ್ನೂ ಸಾಕಿಕೊಳ್ಳುವುದಾದರೆ ಕೊಟ್ಟೇನು............

ವೇಶ್ಯೆ—'(ಯೋಚಿಸಿ, ನಗುಮುಖಳಾಗಿ) ........ಹೂ! ಆಗಲಿ.

ಲಲಿತ—'ಹಾಗಾದರೆ ಕರೆದುಕೊಂಡು ಹೋಗು....ಇಂದಿ

ನಿಂದ ಅವರು ನನ್ನ ಮಕ್ಕಳಲ್ಲ........ನಿನ್ನ ಮಕ್ಕಳು ......(ಮಕ್ಕಳನ್ನೊಮ್ಮೆ ಅಪ್ಪಿ ಮುದ್ದಿಟ್ಟು) ........ನೀವಿಬ್ಬರೂ ಇವರೊಂದಿಗೆ ಹೋಗಿರಿ....ಊಟ ಹಾಕುತ್ತಾರೆ. ನಾನು ಆಮೇಲೆ ಬರುತ್ತೇನೆ. (ಎಂದು ಅವರನ್ನು ವೇಶ್ಯೆಯೊಂದಿಗೆ ಕಳುಹಿ ಮತ್ತೆ ಶೂನ್ಯದೃಷ್ಟಿ ಬೀರುವಳು. ಮುಖದಲ್ಲಿ ಕ್ರೌರ್ಯವು ಎದ್ದು ಕಾಣುವುದು.)

ಪರಿದಾಸ—'....ನಿನ್ನ ಮಕ್ಕಳನ್ನು ವೇಶ್ಯೆಗೇಕೆ ಕೊಟ್ಟೆ? ಅನಾಥಾಲಯಕ್ಕೆ ಸೇರಿಸಿದ್ದರೆ ಆಗುತ್ತಿರಲಿಲ್ಲವೆ?

ಲಲಿತ—'ಅನಾಥಾಲಯದಲ್ಲಿ ಅವರು ನನ್ನ ಮಕ್ಕಳಿಗೆಡೆಯಿಲ್ಲವೆಂದರು.

ಪರಿದಾಸ—'ಛೆ! ಪಾಪ, ಪಾಪ! ಹಾಗಾಗಬಾರದಾಗಿತ್ತು. ....ಭಗವತ್ಸಂಕಲ್ಪ ಹೇಗಿದೆಯೋ? (ಯೋಚಿಸಿ) ನಿನ್ನ ಸ್ಥಿತಿ ನೋಡಿ ನನಗೆ 'ಅಯ್ಯೋ' ಎನಿಸುತ್ತಿದೆ......... ಸಾಧ್ಯವಾದಷ್ಟು ಸಹಾಯಮಾಡಬೇಕೆಂಬ ಮನಸ್ಸು.... ದೈವೇಚ್ಛೆ ಹೇಗಿದ್ದರೆ ಹಾಗಾಗುತ್ತೆ........ಪ್ರಯತ್ನಿಸುವುದು ಪುರುಷನದು; ಫಲವೀಯುವುದು ಪುರುಷೋತ್ತಮನದು......ಇಲ್ಲಿ ನೋಡೂ—ನಿನಗಾರೂ ದಿಕ್ಕಿಲ್ಲ—ನನಗೂ ಯಾರೂ ಗತಿಇಲ್ಲ..... ಏನೋ ನಾಲ್ಕು ಕೀರ್ತನೆ ಹಾಡಿ ಭಿಕ್ಷ ಎತ್ತಿಕೊಂಡು ಅಕ್ಕಿ ತರ್ತೀನಿ.... ಆದರೆ ದಿನಾ ಅನ್ನ ಬೇಯಿಸೋದು ಒಂದು ಗೋಳಾಗಿಬಿಟ್ಟಿದೆ. .......ಮನೇಲಿ ಏನೋ ಒಬ್ಬ ಗೃಹಿಣೀಂತ ಇದ್ದರೆ.......ಗಂಡಸು ಮನೇಗೆ ಧಾನ್ಯ ಹೇಗಾದರೂ ತಂದ್ಹಾಕಿ ಬಿಡ್ತೀನೆ....ನೀನು....ಮನಸ್ಸು ಮಾಡಿದರೆ ನನಗೂ ಒಂದು ನೆಲೇಂತ ಸಿಕ್ಕಿದ ಹಾಗಾಗುತ್ತೆ........

ಅದೂ ಅಲ್ಲದೆ ಹರಿದಾಸರ ಸೇವೆ ಮಾಡಿದರೆ ಇಹಕ್ಕೆ ಸುಖ-ಪರಕ್ಕೆ ಪುಣ್ಯವಾಯ್ತು....

ಲಲಿತ—'(ವ್ಯಂಗ್ಯ ನಗು ನಕ್ಕು) ಹರಿದಾಸರಿಗೂ ಮೋಹ ತಪ್ಪಿದ್ದಲ್ಲ ....... (ಗಂಭೀರಳಾಗಿ ತನ್ನಲ್ಲೇ) ........ಮಕ್ಕಳಿಗಂತೂ ತಿನ್ನಲು ದಾರಿಮಾಡಿ ಕೊಟ್ಟಾಯ್ತು.... ಇನ್ನು ನಾನು ಇದ್ದೇನು ಪ್ರಯೋಜನ? ......... ಈ ಹಾಳುಭೂಮಿಯ ಮೇಲೆ ಇದ್ದಷ್ಟು ದಿನವೂ ಹೊಟ್ಟೆಗಾಗಿ ಇತರರ ಮುಂದೆ ಗೋಗರೆಯುವುದು ತಪ್ಪದು ..........ಜೀವಿಸಿದ್ದರಲ್ಲವೇ ಹೊಟ್ಟೆಯ ಚಿಂತೆ—ನನಗಿನ್ನಾವ ಬಂಧನ..... ಇಂದೇ ಈ ಹಾಳು ಬಾಳನ್ನೇಕೆ ಕೊನೆಗಾಣಿಸಬಾರದು? ...........(ಎಂದು ನಿರ್ಧರಿಸಿಕೊಂಡು ತೆರಳುವಳು)

ಹರಿದಾಸ—'(ಲಲಿತಮ್ಮನು ಹೋದೆಡೆ ಬಾಯ್ಬಿಟ್ಟು ಕೊಂಡು ಕ್ಷಣಕಾಲ ನೋಡುತ್ತಿದ್ದು, ನಂತರ ಚೇತರಿಸಿಕೊಂಡು)

"ನಿತ್ಯವಿಲ್ಲ ವೀ ದೇಹ ನಿತ್ಯವಲ್ಲ"

(ಎಂದು ಹಾಡುತ್ತ ತನ್ನ ದಾರಿ ಹಿಡಿಯುವನು.)

(ತೆರೆಯುರುಳುವುದು)



# ಅನಾಥೆ

## ಏಕಾಂಕ ನಾಟಕ

●

### ದೃಶ್ಯ ೧

[ಗಿರಣಿಯಲ್ಲಿ ಹೆಣ್ಣು ಕೂಲಿಗಳ ಭಾಗ. ಕೂಲಿಗಳು ಬಾಬಿನ್ನುಗಳಿಗೆ ನೂಲು ಸುತ್ತುತ್ತಿದ್ದಾರೆ. ಹುಡುಗನೊಬ್ಬನು ನೂಲಿನ ಒಂದು ಕಟ್ಟನ್ನು ಹೊತ್ತು ತಂದು ಕೆಳಗೆ ಹಾಕಿ, ಅದರಮೇಲೆ ಕುಳಿತು ವಿಶ್ರಮಿಸಿಕೊಳ್ಳುತ್ತಿರಲು ಒಬ್ಬ ಹೆಣ್ಣಾಳು]

ಹೆಣ್ಣಾಳು:—"ಎಲ್ಲಾ ಮಗಾ ಒಂದ್ಪದಾ ಹೇಳ್ತ್ರೀಗ, ಕೇಳ್ತಾನಿ' (ಎಂದು ನಗುನಗುತ್ತ ಅವನೆಡೆ ನೋಡುವಳು)

ಹುಡುಗ—(ಹಲ್ಲುಕಿರಿದು, ನೂಲಿನಕಟ್ಟು ಬಿಚ್ಚುತ್ತ ಹಾಡುವನು)

"ಸಕಲಕೆಲ್ಲಕೆ ನೀನೇ ಅಕಳಂಕ ಗುರುವೆಂದು
ನಿಖಿಳಶಾಸ್ತ್ರವು ಪೇಳುತಿರಲರಿದೆನು ||
ಅವರವರ ದರುಶನಕೆ| ಅವರವರ ವೇಷದಲಿ|
ಅವರವಂಗೆಲ್ಲ ಗುರು ನೀನೊಬ್ಬನೆ ||
ಅವರವರ ಭಾವಕ್ಕೆ| ಅವರವರ ಅರ್ಚನೆಗ|
ಅವರವರಿಗೇ ದೇವ ನೀನೊಬ್ಬನೆ|| ೧

[ಈ ವೇಳೆಗೆ ಗಿರಣಿಯ ಪೇಸೇಪರ್ ಕೈಯ್ಯಲ್ಲೊಂದು ಬೆತ್ತವನ್ನು ಹಿಡಿದು ಪ್ರವೇಶಿಸಿದವನು, ಹುಡುಗನ ಹಾಡನ್ನು ಕೇಳಿ ಮುಖ ಗಂಟುಹಾಕಿ ಮರೆಯಲ್ಲೇ ನೋಡುತ್ತ ನಿಲ್ಲುವನು. ಹುಡುಗನಿದನ್ನು ಕಾಣದೆ, ಮುನ್ನಿನಂತೆ ಹಾಡಿಕೊಂಡು ನಿಧಾನವಾಗಿ ತನ್ನ ಕೆಲಸದಲ್ಲಿ ತೊಡಗಿರುವನು.]

ಹುಡುಗ—'ಹೋರಾಟವಿಕ್ಕಿಸಲು। ಬೇರಾದೆಯಲ್ಲದೆ।
ಬೇರುಂಟೆ ಜಗದೊಳಗೆ। ಎಲೆ ದೇವರೆ ॥
ಆರು ಅರಿಯರು ನೀನು। ಬೇರಾದ ಪರಿಗಳನು
ಮಾರಾರಿ ಶಿವ। ಷಡಕ್ಷರಿ ಲಿಂಗವೆ ॥ ೨ ॥

[ಮೇನೇಜರ್ ಮುಂದೆ ಬಂದು ದುರದುರನೆ ಹುಡುಗನನ್ನು ನೋಡುತ್ತಾ ಕ್ಷಣಕಾಲ ನಿಲ್ಲುವನು. ಹುಡುಗನು ಗಾಬರಿಗೊಂಡು ಸರಸರನೆ ತನ್ನ ಕೆಲಸದಲ್ಲಿ ತೊಡಗುವನು; ಆಗ]

ಮೇನೇಜರ್—(ಹುಡುಗನನ್ನು ಕುರಿತು) ಬಾರೋ ಇಲ್ಲಿ,

ಹುಡುಗ— (ಬಿಳುಪೇರಿದ ಮುಖದೊಡನೆ, ಕೈಗಳನ್ನುಜ್ಜುತ್ತ ಮೆಲ್ಲನೆ ಮುಂದುವರಿದು ಬಳಿಗೆ ಬರುವನು)

ಮೇನೇಜರ್—ಕೆಲಸ ಮಾಡೋಕೋ, ಹಾಡೋಕೋ ಬರೋದಿಲ್ವೆ....ನೀನು?........ಆ ...?

ಹುಡುಗ— (ನಡುಗುತ್ತ) ....ನಾನ್ಹಾಡ್ತಿರಲಿಲ್ಲ ಸಾರ್— .... ....ಅವಳು ಹಾಡೂಂದ್ಲೂ ಅದಕ್ಕೋಸ್ರ ...

(ಎಂದು ಹಾಡಲು ಹೇಳಿದವಳ ಕಡೆ ಕೈತೋರಲು)

ಹೆಣ್ಣಾಳು—(ತಟ್ಟನೆ)....ನೋಡಿ ಬುದ್ಧಿ ... ......ನಾನೇಳ್ದ್ನಂತೆ........ಕೇಳಿ ಬೇಕಾದ್ರೆ ಇಲ್ಲಿರೋವಷ್ಟೀಯ ....... ನಾನ್ಯಾಕೇಳಾಕೋಗ್ಲಿ ನನ್ನೊಡ್ಯಾ ....... .......ಸುಂಕಿರ್ನಾರ್ದೆ........?....

ಮೇನೇಜರ್—(ಪಟಪಟನೆ ಬೆತ್ತದಿಂದ ಹುಡುಗನನ್ನು ಹೊಡೆಯುವನು. ಹುಡುಗನು ಕುಣಿಯುತ್ತ—ಅಳುತ್ತ)

ಹುಡುಗ—ತಪ್ಪಾಯ್ತು ಸಾರ್....ಹಾಡೋದಿಲ್ಲಾ ಸಾರ್ ....ಇನ್ಮೇಲೆ....

ಮೇನೇಜರ್—ನಾನೂ ಹೊಡ್ಯೋವಿಲ್ಲ.... ಇನ್ಮೇಲಿ........ Get out.... ಕೆಲಸಕ್ಬರಬೇಡಾ ಹೋಗು.... ಇನ್ಮೇಲೆ ....(ಮತ್ತೆ ಚಡೇಟು ಹೊಡೆಯಲು, ಹುಡುಗನೋಡುವನು)

[ಮೇನೇಜರ್ ಒಮ್ಮೆ ಕ್ರೂರದೃಷ್ಟಿಯನ್ನು ಸುತ್ತಲೂ ಬೀರಿ ಮರೆಯಾಗುವನು.]

ಹೆಣ್ಣಾಳು—(ಪಕ್ಕದಲ್ಲಿದ್ದ ಮತ್ತೊಬ್ಬಳಿಗೆ) ...ನೋಡ್ದೇನವ್ವಾ .....ಹುಡಗನ್ನ.... ನನ್ಮಾಯಿಗ್ಮಣ್ಣಾಕ್ಬುಟ್ಟಿದ್ನಲ್ಲಾ........ ಸ್ವಲ್ಪದ್ರಾಗೆ.... ಆ....?.... ಶಿವ್ನೇಂತ ಸನ್ನಷ್ಟಕ್ನಾನಿದ್ರೆ ನಾನ್ ಪಡಾ ಏಳೂಂದೇಂತ........ಎಲ್ಲಾ ಅವರಕ್ಕನ್ ತಯಾರಿ......ಅಲ್ವಾ ?.... ಈವಿಂಗ್ ಮಾಷ್ತ್ರು ಕಣ್ಣಿಗ್ಮಣ್ಣ್ರಾರಿ, ಏನೋ ಗಿಲೀಟ್ಮಾಡಿ ತಮ್ಮನ್ನಿಲ್ಲಿ ಕೆಲ್ಸಕ್ಸೇರೀಸ್ಬುಟ್ಳು. ಆನಯ್ಯ ಆ ಹುಡಗನ್ಮಾತಾಡೀಸ್ದೇ ಬುಟ್ರೆ, ಮೇನೇಜರಿ ಸುಂಕಿದ್ಯಾರಾ.... ತಿಂಗ್ಳಾಯಿತ್ಲೂನೂವೆ ಕೂಲಿ ಎಣಿಸ್ಮಡ್ಗಾಕಿಲ್ವಾ ಮುಂಪೆ.... ದುಡ್ಡು ಸುಂಕೆ ಬತ್ತದಾ ?....

ಮತ್ತೊಬ್ಬಳು—ಪದಾ ಆಡ್ತೌಂಸ್ರ ಏನಾಯ್ತೋ ಕಾಣ್ಣವ್ವ ....ಗೇಯಾಕಿಲ್ವಾ.... ? ಮಕ್ಳು ಪದಾ ಆಡ್ಕೊಂಡು ದುಡದ್ರೆ ಇವರಪ್ಪನ ಗಂಟೋಯ್ತದೇನೊ........ಉ.... ಅವನ್ನು ಎಂಡ್ರು—ಮಕ್ಳು ಇದ್ದಿದ್ರಲ್ವಾ ಕಳ್ಳುಮಿಡಿದಾತು?.... ಅವ್ರೂ ಇಲ್ಲಾ ಅವ್ರೂನೂವೆ ಇವನ್ಮಾಟಾ ತಡೀನಾರ್ದೇ ಶಿವ ಶಿವಾಂದ್ರೋ? ...(ರಂಗಮ್ಮನು ಬಂದುದನ್ನು ಕಂಡು ಆವಳನ್ನು ಕುರಿತು) ........ವ್ಮೋವ್........ ರಂಗವ್ವ........ನಿನ್ ತಮ್ಮ ಪದಾ ಆಡ್ಕೊಂಡಿದ್ದಾಗ ಮೇನೇಜರಿ ಕಂಡ್ಕೊಂಬುಟ್ಟು ಒಡ್ಡುಟ್ಬುಟ್ಟ್ನೆ. ಕೂಲೀ

ಗ್ಬರ್ಬೇಡಾಂತಂದು........ಓಗು........ಓಡೋಗಿ ಮಾಷ್ಟ್ರು ಗೇಳು.... (ರಂಗಮ್ಮನು ದಿಕ್ಕುತೋಚದೆ ನಿಲ್ಲುವಳು)

ಮೊದಲನೆಯವಳು—ಮಾಷ್ಟ್ರು ಕೈಲೇನಾದಾತು ಈಗ.... ....?.......ಮೇನೇಜರಿ ಬಂಗ್ಲೇಗೇ ಓಗಿ ಕಾಲಿಗ್ಬಿದ್ದು ಕುಯ್ಯೋ-ಮರ್ರ್ರೋಂತಂದು, ಅವ್ರೇಳ್ದಂಗೆ ಕೇಳ್ಕೊಂಡಿದ್ಬಂದ್ರೆ ಏನಾರಾ ಆದಾತು....ಪಾಪ!........ಅವರೂ ಒಬ್ಬಂಟಿಗರು....ಅಲ್ವೇನವ್ವಾ?........

[ಎಂದು ಇತರರ ಕಡೆ ತಿರುಗಿ ಅರ್ಥಗರ್ಭಿತವಾದ ದೃಷ್ಟಿಬೀರಿ, ನಸು ನಗುವಳು. ಇತರರು ಘೊಳ್ಳೆಂದು ನಗುವರು. ರಂಗಮ್ಮನ ಮುಖವು ವಿವರ್ಣವಾಗುವುದು. ವೀವಿಂಗ್ ಮಾಷ್ಟರನ್ನರಸಲು ಅಲ್ಲಿಂದ ಸರ್ರನೆ ತೆರಳುವಳು. ಅದನ್ನು ಕಂಡು]

ಮೊದಲನೆಯವಳು—....ಉ... ನೋಡವ್ವ ಈಯವ್ವನ್ ದಿಮಾಕ್ನ........ಇನ್ನೋಗಿ ಈವಿಂಗ್ ಮಾಷ್ಟ್ರುತಾವ ನಮ್ಮೇಗೆ ದೂರು ಏಳಾಕೋದ್ಲೇನೊ....ನೋಡವ್ವ.... ನಾನೇನಂತಾದ್ದು ಅನ್ಬಾರದ್ದನ್ನಾ....ಆ........? .... ಇದ್ದಿದ್ದೇಳ್ದೆ........ಏನಿಲ್ಲಿ ಕೂಲೀಗ್ಬಂದ ಚೆಂದೊಳ್ಳೇ ಎಣ್ಗಳೆಲ್ಲಾ ನೆಟ್ಗರೋದು? ಅವ್ರೆಲ್ಲಾ ಎಂಗಾದ್ರೋ ಅಂಗೇನೆ ಇವ್ರುನೂವೆ.... ಅದೂ ಸಾಲದ್ಕಿಮ್ಮೇಗೆ ಈಯವ್ವನ್ನೂ ಗಂಡ ಬುಟ್ಬುಟ್ಟವ್ನೇಂತ ಆದ್ಮೇಕೆ.... ಯಾರಾರಾ ಇನ್ನಿರ್ಲೇ ಬೇಕಲ್ವಾ?..........ಮೇನೇಜರಿ ಮನ್ಗೋಗಿ ಬರೋದ್ಕೂ ನಸೀಬು ಇರ್ಬೇಕಲ್ವಾಂತಂದೆ ....ಅದ್ಕೇ ಸೆಟ್ಕೊಂಡೋದ್ಲು.... ಅಷ್ಟಲ್ದೇ ಏನ್ರಾರಾ ಸಾಚಾ ಮಾತಾಡೋರಿಗ್ಕಾಲಾ ಅಲ್ಲಾ ಇದೂಂತ....

---

## ದೃಶ್ಯ ೨

[ಗಿರಣಿಗೂ ಗಿರಣಿಯ ಕಛೇರಿಗೂ ಮಧ್ಯೆ ಕೂಲಿಯವರು ಯಾರೂ ಓಡಾಡದ ದಾರಿಯಲ್ಲೊಂದು ಭಾಗ. ರಂಗಮ್ಮನೂ ವೀವಿಂಗ್‌ಮಾಸ್ಟರ್ ಮಾಧವನೂ ಮಾತನಾಡುತ್ತ ಬಂದು ನಿಲ್ಲುವರು ]

ಮಾಧವ—ನಾನೇನು ಮಾಡೋಕಾಗತ್ತಮ್ಮಾ ? ಮೇನೇಜರ್ರೇ ಅವನ್ನ 'ಡಿಸ್‌ಮಿಸ್' ಮಾಡಿದಮೇಲೆ, ನಾನು ಪುನಃ ಅವನ್ನ ಕೆಲಸದಲ್ಲಿಡೋದು ಸಾಧ್ಯವೆ? ಒಂದು ವೇಳೆ ಮತ್ತೆ ಹಾಗೆ ತೆಗೆದುಕೊಂಡರೂ, ಅವನ್ನ ಯಾರಾದರೂ ಮೇನೇಜರ್ ಕಿವೀಗೆ ಹಾಕಿಬಟ್ರೆಂದ್ರೆ ಆಮೇಲೆ ನನ್ನ ಕೆಲ್ಸಕ್ಕೆ ಕಲ್ಲು ಬೀಳುತ್ತೆ. ಏನು ಮಾಡ್ಲಿ ಹೇಳು?

ರಂಗಮ್ಮ—ನಾವು ದಿಕ್ಕಿಲ್ಲದವರಣ್ಣಾ ...ಏನೋ ಕೈಹಿಡಿದವರಾದರೂ ನಮಗೆ ನೆರವಾಗಿದ್ದಿದ್ದರೆ ನಮಗೀ ದುಃಸ್ಥಿತಿ ಬರ್ತಿರ್ಲಿಲ್ಲ....ನಮಗೂ ಹೊಟ್ಟೆ ಅನ್ನೋದನ್ನ ಹಾಳಾದ ದೇವರು ಕೊಟ್ಟು, ಅದನ್ನ ತೃಪ್ತಿಪಡಿಸೋಕೆ ಚೈತನ್ಯವಿಲ್ಲದ ಹಾಗೆ ಮಾಡ್ತಿದಾನೆ ...ಬರೋ ಕೂಲೀನೇ ಕಡಿಮೆ ....ಕೈಗೂ ಬಾಯಿಗೂ ಸಾಲ್ದೇ ಇದೆ ...ಇವರ ಜತೆಗೆ ನನ್ನಮ್ಮನಿಗೆ ಬರ್ತಿದ್ದ ನಾಲಕ್ಕಾಣೂ ಹೋಯ್ತೂಂದ್ರೆ ಜೀವನ ಬಹಳ ಕಷ್ಟವಾಗುತ್ತೆ....ನೀವೇನಾದ್ರೂ ಮೇನೇಜರಿಗೆ ಹೇಳಿ....

ಮಾಧವ— ಅಯ್ಯಯ್ಯೊ....ಅವರು ದೊಡ್ಡೋರು....ಮನಸ್ಸಿಗೆ ಬಂದದ್ದು ಮಾಡಬಹುದು ... ...ನಾವ್ಹೇಳಿದ್ದು ಕೇಳ್ತಾರ್ಯೇ........ ? ಇಲ್ಲಾ ನಾವು ಹೇಳೋಕ್ತಾನೇ ಆಗುತ್ತೋ....?

ರಂಗಮ್ಮ—ನೀವು ಮನಸ್ಸು ಮಾಡಿದ್ರೆ ಆಗತ್ತೇನೋಂತ ನನಗಾಸೆ....ಇಷ್ಟು ಮಾತ್ರ ಸಹಾಯಮಾಡೀಪ್ಪ.......

ನಾವಿನ್ಯಾರನ್ನ ಕೇಳೋಣ ನಿಮ್ಮನ್ನಲ್ದೆ....ನಿಮ್ಕಾಲಿಗೆ ಬೀಳ್ತೇನೆ (ಎಂದು ಕಾಲು ಹಿಡಿದುಕೊಳ್ಳಲು ಹೋಗುವಳು)

ಮಾಧವ— (ತಡೆದು)....ಛೆ! ಛೆ! ಏಳಮ್ಮ.... ....ಪಕ್ಕದಲ್ಲಿ ಮೇನೇಜರ್ ಬರುವುದನ್ನು ಗಮನಿಸಿ) ... ಅಗೊ (ಮೇನೇ ಜರ್ ಇತ್ತ ಕಡೆಯೇ ಬರ್ತಿದ್ದಾರೆ....ನೀನೇ ಕೇಳು.... (ಎಂದು ಹೊರಡಲೆತ್ನಿಸುವ ವೇಳೆಗೆ, ಮೇನೇಜರ್ ಪ್ರವೇಶಿಸಿ, ಇಬ್ಬರನ್ನೂ ನೋಡಿ)

ಮೇನೇಜರ್—ಏನ್ ಮಾಡ್ತಿದ್ದೀರಿ....ನೀವಿಬ್ರೂ ಇಲ್ನಿಂತ್ಕೊಂಡು....ಆ....? What is the meaning of wasting your time here Madhava-Rao? (ನೀವಿಲ್ಲಿ ಕಾಲ ಕಳೀತಿರೋದರ ಅರ್ಥವೇನು, ಮಾಧವ ರಾವ್?)

ಮಾಧವ—ಏನಿಲ್ಲ ಸರ್....ಈಕೆ ಏನೋ ಕಂಪ್ಲೈಂಟ್ ಹೇಳ್ತಿದ್ಲು........ಅದನ್ನ ತಮ್ಮ ಹತ್ರ ಹೇಳ್ಕೊಂತ ಹೇಳ್ತಿದ್ದೆ ಅಷ್ಟೆ....

ಮೇನೇಜರ್—(ರಂಗಮ್ಮನ ರೂಪವನ್ನೇ ದಿಟ್ಟಿಸಿ ನೋಡುತ್ತಿದ್ದವನು) ....I see....ಹುಂ....ನನಗೀಗ ಪುರಸತ್ತಿಲ್ಲ ....ನನ್ನ ಕ್ವಾರ್ಟರ್ಸಿಗೆ ಕಳ್ಸಿ....ನೋಡೋಣ.... (ಎಂದು ಹೊರಟು ಹೋಗುವನು.)

ಮಾಧವ—ಕೇಳಿದೆಯಾ ಅವರು ಹೇಳಿದ್ದು?

ರಂಗಮ್ಮ—ಅವರ ಮನೇಗ್ಹೋಗ್ಹೋಗೋದು ?....ಕೂಲಿಯವರು ಅವರ ವಿಷಯ ಏನೇನೋ ಹೇಳ್ತಾರೆ....

ಮಾಧವ—(ತಟ್ಟನೆ)....ಎಲ್ಲಾ ಕೆಲಸವಿಲ್ಲದ ಮಾತುಗಳು ....ಯಾವ್ದೂ ನಿಜವಲ್ಲ........ನೀನು ಹೆದರ್ದೆ ಅವರ ಮನೆಗ್ಹೋಗು........ಶುಭ್ರವಾದ ಬಟ್ಟೇನುಟ್ಕೊಂಡು ಹೋಗು....ಇಲ್ದೇ ಇದ್ರೆ ಒಳಗೆ ಸೇರ್ಸೊಲ್ಲ....

ರಂಗಮ್ಮ—ಇಲ್ಲ.....ನನಗೇಕೊ ಭಯವಾಗುತ್ತೆ............ ಹೊಟ್ಟೆಗೆ ಕಡಮೆಯಾದರೂ ಅನುಭವಿಸ್ತೇನೆ......ನಾನವರಲ್ಲಿಗೆ ಹೋಗೋಲ್ಲ.....

ಮಾಧವ—(ಹೆದರಿ) ಮಹರಾಯ್ತಿ....ಹಾಗೆಮಾಡಿ ನನ್ಬಾಯಿಗೆ ಮಣ್ಣಾಕ್ಬೇಡ,....ನಾನ್ನಿನ್ನೊತ್ತೇಲಿ ಇಲ್ಲಿದ್ದದ್ದು ನೋಡಿದ ಮೇನೇಜರು, ನೀನ್ಹೋಗ್ದೇ ಇರೋದಕ್ಕೆ ನಾನೇ ಕಾರಣಾಂತ ತಿಳ್ಕೊಂಡು, ಆಮೇಲೆ ನನ್ನ ಕೆಲಸಕ್ಕೆ ಚಕ್ಕರ್ ಹಾಕಿ, ತಮ್ಮ ಸೇಡು ತೀರಸ್ಕೊಂಡ್ಬಿಡ್ತಾರೆ......ನಿನ್ದಮ್ಮಯ್ಯ......ತಪ್ದೆ ಹೋಗು....

ರಂಗಮ್ಮ—(ಮೌನ)

ಮಾಧವ—ನಿನ್ನ ರೂಪಕ್ಕೆ ಯಾರಾದರೂ ಸೋಲ್ತಾರೆ.... ರಂಗಮ್ಮ .... ಮೇನೇಜರ್ ನಿನ್ನ ಮನೇಗೆ ಕಳ್ಸೂಂತ ಹೇಳಿದ್ದು ನಿನ್ನ ಅದೃಷ್ಟ ...ಹೋಗು....ಅವರು ಹೇಳಿದ್ದಾಗೆ ಕೇಳಿದ್ರೆ....ಆಮೇಲೆ ನೀನು ಹೀಗೆ ಕೂಲಿ ಕೆಲಸ ಮಾಡಬೇಕಾದ್ದೇ ಇಲ್ಲ ...

ರಂಗಮ್ಮ—(ಅಸಹ್ಯದಿಂದ).... ನೀವೂ .. ಹೀಗೆ....?

ಮಾಧವ—(ವಿವರ್ಣಮುಖನಾಗಿ, ತಲೆ ತಗ್ಗಿಸುವನು. ಮತ್ತೆ ಕ್ಷಣ ಕಾಲಾನಂತರ, ಉಗುಳು ನುಂಗುತ್ತ) .... ಮಿಲ್ಲಿನ ಕೂಲಿ ಕೆಲಸಕ್ಕೆ ಬರೋರು ಯಾರೂ ಆ ದಾರಿಯಿಂದ ದೂರವಾಗಿಲ್ಲ .......ಇಲ್ಲಿದ್ದಮೇಲೆ ಹಾಗಿರದಿದ್ದರೆ ಬೇರೆ ಗತಿ ಇಲ್ಲ ........ ಅದಕ್ಕಾಗಿ ಹೇಳ್ದೆ......ಇಲ್ಲಿಗೆ ಬಂದಮೇಲೆ ಮಾನ—ಮರ್ಯಾದೆ ಬಿಟ್ಬಿಡಬೇಕು......ರಂಗಮ್ಮ......

[ರಂಗಮ್ಮನು ಸ್ತಂಭಿತಳಾಗಿ ಎಲ್ಲವನ್ನೂ ಕೇಳುತ್ತಿದ್ದವಳು, ಆಮೇಲೆ ಕೋಪದಿಂದ]

ರಂಗಮ್ಮ—ನೀವೆಲ್ಲ ಚೈತನ್ಯವಿದ್ದವ್ರೂಂತ ತಿಳ್ಕೊಂಡು ಏನೋ ನನ್ನಮ್ಮನಿಗೂ, ನನಗೂ ಎರಡ್ಹೊತ್ತು ಊಟ ಕ್ಕನುಕೂಲ ಮಾಡಿಕೊಡೀಂತ ನಿಮ್ಮುಂದೆ ಅಂಗಲಾಚಿದೆ.... ಜೀವನಕ್ಕೆ ಇರೋದಿದೊಂದೇ ದಾರೀಂತ ಒಂದು ಹೊಸವೃತ್ತಿಯ ಉಪದೇಶ ಮಾಡಿದ್ರೀ.... ಸಂತೋಷ ....ಅಗತ್ಯವಾಗಿ ಮೇನೇಜರ್ ಮನೇಗ್ಹೋಗ್ತೇನೆ.... ಏನ್ಹೆದರ್ಬೇಡಿ....

ಮಾಧವ—ಇದ್ದದ್ದು ಹೇಳ್ದೆ ರಂಗಮ್ಮ....ನನ್ನ ಮೇಲೆ ಕೋಪ ಮಾಡ್ಕೋಬೇಡ....

ರಂಗಮ್ಮ—ಛೆ! ಕೋಪ ಏಕೆ. ಏನೋ ಹಿಂದೆ ಕಷ್ಟಾಂದಾಗೆಲ್ಲ ಕೈಲಾದಸಹಾಯ ಮಾಡಿದ್ರಿ....... ಅದರಂತೆ ಈಗ್ಲೂ ಹೇಳ್ಕೊಂಡದ್ದಕ್ಕೆ .......ಇನ್ನೊಂದು ಸುಲಭ ಜೀವನವ ದಾರಿ ತೋರಸ್ಕೊಟ್ರಲ್ಲಾ........ಇವೆಲ್ಲಕ್ಕೂ ನಾನು ನಿಮ್ಮ ಋಣದಲ್ಲಿರೋವಾಗ ಕೋಪಸ್ಕೊಳ್ಳೋದೊಂದ್ರೇನು? (ಎಂದು ಕೃತಕ ನಗುವಿನೊಡನೆ ವ್ಯಂಗ್ಯವಾಗಿ ನುಡಿಯುವಳು.)

ಮಾಧವ—(ಅರ್ಥವಾಗದೆ) ... ರಂಗಮ್ಮ?

ರಂಗಮ್ಮ—ನಿಮ್ಮನಷ್ಟಲ್ಲಿರೋದೂ ಬಲ್ಲೆ. ನೀವೂ........ ಹೆಂಗ್ಸಾಗಿ ಹುಟ್ಟಿದ್ರೆ ಆಗ್ಲೊತ್ತಾಗೋದು......ಯಾವಾಗ್ಲಾದ್ರೂ ಪುರುಸತ್ತಾಗಿರೋವಾಗ ಬನ್ನಿ..........ನಿಮ್ಮಾಸಲಾನೂ ಅದೇ ರೀತೀಲೇತೀರಸ್ಬಿಡ್ತೇನೆ......(ಎಂದು ನುಡಿದು ದುಃಖವು ಉಕ್ಕಿಬರಲು ಕೈಗಳಿಂದ ಮುಖ ಮುಚ್ಚಿಕೊಂಡು ಸರ್ರನೆ ಹೊರಟು ಹೋಗುವಳು.)

[ಮಾಧವನು ಕಳೆಗುಂದಿ ತಲೆಬಗ್ಗಿಸಿ ನಿಲ್ಲುವನು.]

ತೆರೆ

## ದೃಶ್ಯ ೩.

[ಆರು ತಿಂಗಳ ನಂತರ ಒಂದು ರಾತ್ರಿ. ರಂಗಮ್ಮನ ಮನೆಯಲ್ಲಿ ಒಂದು ಸೀಮೆಯೆಣ್ಣೆಯ ದೀಪ ಉರಿಯುತ್ತಿದೆ. ನೆಲದಮೇಲೆ ಹಾಸಿರುವ ಚಾಪೆಯಮೇಲೆ ರಂಗಮ್ಮನು ಕುಳಿತಿದ್ದಾಳೆ. ಮುಖದಲ್ಲಿ ರೌದ್ರಭಾವವು ಮೂಡಿದೆ. ಅವಳ ತೊಡೆಯಮೇಲೆ ತಲೆಯಿಟ್ಟುಕೊಂಡು ಅವಳ ತಮ್ಮನು ಮಲಗಿ, ಅವಳ ಮುಖವನ್ನೇ ನೋಡುತ್ತಿದ್ದಾನೆ. ಅವನ ಮುಖದಲ್ಲಿ ಭಯವು ಕಾಣುತ್ತಿದೆ. ಸ್ವಲ್ಪಕಾಲ ಮೌನ. ಅನಂತರ]

ಹುಡುಗ—(ಮೆಲ್ಲನೆ)........ಅಕ್ಕ....

ರಂಗಮ್ಮ—(ಮೌನ)

ಹುಡುಗ—........ಅಕ್ಕ....ಇದೇಕೇ ಹೀಗಿದ್ದಿ ಇವತ್ತು?

ರಂಗಮ್ಮ—(ಮೆಲ್ಲನೆ ತಮ್ಮನ ಕಡೆ ತಿರುಗಿ ನೋಡುವಳು)

ಹುಡುಗ—....ಅಕ್ಕ....ನನಗ್ಯಾಕೋ ಭಯವಾಗತ್ತೆ ಕಣೆ··

ರಂಗಮ್ಮ—ಭಯವ್ಯಾಕೆ ಮಗೂ....?

ಹುಡುಗ—ನಿನ್ನೋಡಿದ್ರೆ ಹಾಗಾಗ್ತಿದೆ...............ಯಾಕೇ ಹೀಗಿದ್ದೀ? ಮೇನೇಜರ್ ಏನಾದ್ರೂ ನಿನ್ನ ಇನ್ಮೇಲೆ ತಮ್ಮನೇ ಕೆಲಸಕ್ಕೆ ಬರ್ಬೇಡಾಂದ್ರೇನೆ....?

ರಂಗಮ್ಮ—(ನಗಲೆತ್ನಿಸುತ್ತ)......... ಸ್ವಲ್ಪ ಹೆಚ್ಚೂ ಕಡಿಮೆ ಹಾಗೇ........ನಿನಗವೆಲ್ಲಾ....ಹೇಳಿದ್ರೆ ಅರ್ಥವಾಗೊಲ್ಲ ಮಗೂ....ಸುಮ್ಮನೆ ಮಲಕ್ಕೊಂಡು ನಿದ್ದೇಮಾಡು.

[ಕ್ಷಣಕಾಲ ಮೌನ. ಆ ಮೌನದಲ್ಲಿ ಕತ್ತಲೆಯಿಂದ "ಜಾರೆ....... ಜಾರೆ, ಕುಲಟೆ—ತೊಲಗು, ಈ ಬೀಳಿಗಿಂತ ಸಾವು ಮೇಲು—ಜಾರೆ-ಎಂದು ಮೂರು ನಾಲ್ಕು ದನಿಗಳು (Hoarse whispers) ಕೇಳಿಬರುವುವು. ರಂಗಮ್ಮನು ತಡೆಯಲಾಗದೆ ಕಿವಿ ಮುಚ್ಚಿಕೊಳ್ಳುವಳು. ಇದನ್ನು ಗುಮಾನಿಸಿದ]

ಹುಡುಗ--ಅದೇಕಕ್ಕ ?....ಏನಾಗುತ್ತೆ?

ರಂಗವ್ವ—(ಚೇತರಿಸಿಕೊಂಡು) ಏನಿಲ್ಲ ಮಗೂ...........
(ಸ್ವಲ್ಪಕಾಲ ಸುಮ್ಮನಿದ್ದು ಆಮೇಲೆ ಮನಸ್ಸಿನಲ್ಲಿ ದೃಢಮಾಡಿಕೊಂಡು)...ಮಗೂ ನಾಳಿನಿಂದ ಪ್ರಪಂಚವನ್ನು ನೀನೊಬ್ಬನೇ ಎದುರಿಸಬೇಕು...........ಹೆದರ್ದೆ ಎಷ್ಟು ಕಷ್ಟವಾದ್ರೂ ನಿನ್ನ ಹೊಟ್ಟೆಪಾಡು ನೀನು ನೋಡ್ಕೋಬೇಕು ಮಗೂ....ಯಾರು ನಿನಗೆ ಅನ್ನ-ಬಟ್ಟೆಕೊಟ್ಟರೆ ಅವರು ನಿನ್ನ ತಂದೆ - ತಾಯಿಯಂತಂದ್ಕೊಂಡು ಅವರ ಕೆಲಸ ಮಾಡು. ಅವರನ್ನು ಬಿಟ್ಟು ಇನ್ಯಾರನ್ನೂ ನಂಬಬೇಡ ಗೊತ್ತಾಯ್ತೆ....ಮಗೂ?

ಹುಡುಗ—...........ನೀನೇನ್ಮಾಡ್ತೀಯಕ್ಕ?........ನಾನೂ ನಿಂಜೊತೇಲಿರ್ಬೇಡ್ವೇನೆ?

ರಂಗವ್ವ—(ದುಃಖವನ್ನು ತಡೆಗಟ್ಟಿ) ನಾನು ನಿನ್ಜೊತೇಲಿರೊಲ್ಲ ಮಗೂ........ನಾನ್ಬೇರೇ ಕಡೆಗೆ ಹೋಗ್ಬೇಕು.... ...........ಬೆಳಗಾದ್ಮೇಲೆ, ವೀವಿಂಗ್ ಮಾಸ್ಟರಿದ್ರಲ್ಲಾ ಅವರ ಮನೆಗ್ಹೋಗಿ, ಅವರು ನಿನ್ಯಾರ್ಮನೇಗಾದ್ರೂ ಕಳ್ಸೋವರ್ಗೂ ನೀನವರ್ಮನೇಲೇ ಸ ದ್ಯ ಕ್ಕಿ ರು, ಗೊತ್ತಾಯ್ತೆ?

ಹುಡುಗ—(ಅರ್ಥವಾಗದಿದ್ದರೂ) ........ಹೂ........ (ಎನ್ನುವನು.)

ರಂಗವ್ವ—ನೀನೂ ಬೆಳೆದು ಈ ಎಲ್ಲ ಗಂಡಸರ ಹಾಗಾಗ್ಬೇಡ ಮಗೂ, ಮನುಷ್ಯನಾಗು.

[ರಂಗವ್ವನು ಅವನ ತಲೆ ನೇವರಿಸುತ್ತಿರಲು ಹಾಗೆಯೇ ನಿದ್ದೆ ಹೋಗುವನು. ಆಮೇಲೆ ಮತ್ತೆ "ಜಾರೆ.......... ಜಾರೆ" ಎಂಬ

ದನಿಗಳು ಕೇಳಿಬಂದಂತಾಗಿ ರಂಗವ್ವನ ಮುಖದಲ್ಲಿಮೊದಲು ಭಯವು ಕಂಡುಬಂದು ಕ್ರಮೇಣ ಕ್ರೋಧವು ಎದ್ದು ಕಾಣುವುದು. ಮೆಲ್ಲನೆ ತಮ್ಮನ ಮುಖವನ್ನುಮುದ್ದಿಟ್ಟು, ಗೋಡೆಗೆ ತೂಗುಹಾಕಿದ್ದ ದೇವನ ಪಠವನ್ನು ಈಕ್ಷಿಸುತ್ತ]

ರಂಗವ್ವ—ದೀನರಕ್ಷಕಾಂತನ್ನಸ್ಕೊಂಡ ನೀನು ನನ್ನ ಮೊರೆ ಕೇಳಿ ಕಾಪಾಡೋದು ನಂಗೆ ಸುಳ್ಳಾಯ್ತು?............ಈ ಮಗೂನ ನಿನ್ನ ಮಡಿಲಲ್ಲಿ ಹಾಕಿದ್ದೇನೆ...........ಇವ ನ್ನಾದ್ರೂ ಕಾಪಾಡು.

[ಎಂದು, ಸ್ವಲ್ಪಕಾಲದ ಮೇಲೆ ತಮ್ಮನ ತಲೆಯನ್ನು ತಲೆದಿಂಬಿ ಗಿಳಿಸಿ, ಮೆಲ್ಲನೆ ಕಂಬಳಿಯನ್ನವನಿಗೆ ಹೊದ್ದಿಸುತ್ತ, ದುಃಖ ತಡೆಯ ಲಾರದೆ ಬಿಕ್ಕಿ ಬಿಕ್ಕಿ ಅಳುವಳು.]

(ಸ್ವಲ್ಪ ಹೊತ್ತಿನ ಮೇಲೆ ಮೆಲ್ಲನೆ)

........ಮಗೂ........ಇದುವರೆಗೆ ನನ್ನ ದೇಹ ಮಾರಿ ಕೊಂಡಾದ್ರೂ ನಿನ್ನ ಸಾಕಿದೆ...........ಇನ್ನು ಮುಂದೆ ಅದೂ ಸಾಧ್ಯವಿಲ್ಲ....ಮಗೂ; ಪಾಪಿ ಜನಗಳು ಕೊಡ್ತಿ ರೋಹಿಂಸೆ ತಡ್ಕೊಂಡು ಇನ್ನು ಬದುಕಿರ್ಲ್ಲಾರೆ....ಇನ್ನು ಮುಂದೆ ನಿನಗೆ ನೀನೇ ದಿಕ್ಕು, ಎಲ್ಲಾದ್ರೂ ಸುಖವಾ ಗಿರು........(ಎಂದು ಕಣ್ಣೀರಿಕ್ಕುತ್ತಿರಲು, ಸೆರಗಿನಿಂದೊತ್ತಿ ಕೊಳ್ಳುತ್ತ ಮುದ್ದಿಟ್ಟು, ಅವನನ್ನೇ ನೋಡುತ್ತ ನೋಡುತ್ತ, ಹೊರಟು ಹೋಗುತ್ತಿರಲು)

[ಹಿಂದಿನಿಂದ ಈ ಗೀತೆಯನ್ನು ಯಾರೋ ಹಾಡುತ್ತಿರುವಂತೆ ಕೇಳಿಬರುವುದು—.]

* * *

"ಹುಚ್ಚು ಹಿಡಿಸಿದ ಹಾಳು
ಬಾಳ ತೆಗೆದೊಗೆದು,

ಏನಿದೆಯೊ ಅರಿಯದಿಹ,
ಸಾವ ಕೆಳೆ ಬಗೆದು,
ಎಲ್ಲಾದರೂ ಸರಿಯೆ,
ಎಲ್ಲಾದರೂ ಸರಿಯೆ,
ಈ ಲೋಕ ಬೇಡೆಂದು
ಹಾರಿದಳು ನೆಗೆದು.
ಹಾರಿದಳು, ಮುಳುಗಿದಳು,
ತೇಲಿದಳು, ಕೊಚ್ಚಿದಳು,
ಕೊರೆವ ಹೊಳೆಯೊಳಗೆ,
ಎಲವೊ ಕಾಮುಕ, ಕಟುಕ,
ಇಲ್ಲಿ ಬಾ, ನೋಡುಬಾ,
ಎಲ್ಲಿ ಬೆಚ್ಚಗೆ ಮಲಗಿ
ಸಲ್ಲಾಪವಾಡುತಿಹೆ,
ಈಗ ಬಾ, ನೋಡುಬಾ,
ಇವಳೊಡನೆ ಮುಳುಗು ಬಾ,
ಮುಳುಗು ಬಾ, ಪಾಪಿ!

* * *

ಅನಾಥೆ ಇವಳಿನ್ನೊಬ್ಬ
ಳೀ, ಜನ್ಮ ರೋಸಿ,
ವೇಧೆಯನು ತಾಳದೆಯೆ
ಮುಳುಗಿದಳು ಹೊಳೆಗೆ."

[ಈ ಗೀತ ಗಾನವು ದೂರವಾಗುತ್ತ ಬಂದಂತೆ ತೆರೆಯು ಮೆಲ್ಲನುರು ಳುವುದು]

---

*

# ಸರ್ವೇ ಸಾಮಾನ್ಯ

## ಒಂದು ದೃಶ್ಯ



**[ಬೀದಿಯೊಂದರಲ್ಲಿ ಅಯ್ಯರಿ - ಉಪದ್ರವಯ್ಯ ಇಬ್ಬರೂ ಬಲು ಬಿಗಿಯಾಗಿ ಚರ್ಚೆ ನಡೆಸಿಕೊಂಡು ಬರುವರು. ಅಯ್ಯರಿ ಒಂದು ಬಿಳಿ ಪಲ್ಲಾ ಲುಂಗಿ ಸುತ್ತಿಕೊಂಡು ಒಂದ ಟವಲು ಹೊದ್ದಿದ್ದಾನೆ. ಹಣೆ, ಮೈ, ಕೈ ಮೇಲೆ ಕ್ರಮವಾಗಿ ವಿಭೂತಿ ಭಸ್ಮ ಹಚ್ಚಿಕೊಂಡು, ಹಣೆಯಲ್ಲಿ ಅದರ ಮೇಲೆ ಕುಂಕುಮದ ಬೊಟ್ಟಿಟ್ಟುಕೊಂಡಿದ್ದಾನೆ. ದವಡೆಯಲ್ಲಿ ತಾಂಬೂಲದಮುದ್ದೆ, ಕೈಯ್ಯಲ್ಲಿ ಕೊಂಚ ವೀಳ್ಯದೆಲೆ. ಉಪದ್ರವಯ್ಯ ಸಾಧಾರಣ ವಸ್ತ್ರಗಳನ್ನು (ಪಂಚೆ ಕೋಟು ಟೋಪಿ) ಧರಿಸಿದ್ದಾನೆ.]**

ಉಪದ್ರವಯ್ಯ—ನೀವು ಎಷ್ಟೇ ಹೇಳಿ ಅಯ್ಯರೆ .... ನಾನೊಪ್ಪೋದಿಲ್ಲ ... ಹೆಂಗಸರಿಗೆ ಸ್ವಾತಂತ್ರ್ಯ ಕೊಡ್ಲೇಬೇಕೂಂತ ಯಾರು ಎಷ್ಟು ಹೊಡಕೊಂಡರೂ ನಾನ್ಬೇರೇ ಒಪ್ಪೋದಿಲ್ಲ ...

ಅಯ್ಯರಿ—ಅಂಗೆಲ್ಲಾ ಪ್ರತ್ತಿಯಿಲ್ಲಾದೆ ಅಟ ಪಣ್ಣಾವಹ್ ಕೆಂಪಾಂಟಲ್ಲ ಸ್ವಾಮಿ.... ಜನಂಗಳು ಶಿರಿಚಿಪಿಟ್ರಾರೆ.... ಕೊತ್ತಾಯಾ.... ...ಪ್ರೊಮ್ಮಂಡಾಟಿಕ್ಕುಕ್ಕ್ ಸ್ವಾತಂತ್ರ ನೀವುದಾ ಕೊಟತ್ತೀರಾ?.... ...ಪುರುಷರು ಆಕುವುತಿಲ್ಲಾ ಅನಿ ಏಳಿತರೆ ಮನೇಲಿ ಪಮೋಲು ಪಣ್ಣಾತೆ ನಿಮುಕ್ಕ್ ಒಟ್ಟಿಕಿಲ್ಲಾದಂಗೆ ಪಣ್ಣಿವುಟ್ಟು, ಆ ಮೇಲಿ ತಲಿ ಮೇಲಿ

ಒಟಿತು ಎಡತುಕೊಳ್ತಾರೆ ಸ್ವಾಮಿ....ನಿಮಕಿನ್ನ ಪ್ರಪಂಚ ಕೊತ್ತಿಲ್ಲ.

ಉಪದ್ರವಯ್ಯ—ಅದೆಲ್ಲಾ ನಾನ್ನಂಬೋದಿಲ್ಲ....ಅದೆಲ್ಲಾ ಕೈಲಾಗ್ದೋರು ಹೆಂಗಸರಿಗೆ ಹೆದರಿ ಹೇಳೋ ಮಾತೇ ಹೊರ್ತು ಇನ್ನೇನೂ ಇಲ್ಲ....ಅಡಿಗೆಮಾಡೋದಿಲ್ಲಾಂತ ಹೆದರ್ಸಿದ್ರೆ ಹೋಟಲ್ನಿಂದ ತಂದು ತಿನ್ನೋದು ........ ಇಲ್ದಿದ್ರೆ ನಾವೇ ಮಾಡ್ಕೊಂಡು ತಿನ್ನೋದು........ಅದಕ್ಕೆಲ್ಲಾ ಇಷ್ಟ್ಯಾಕ್ಡೋದೆ? ನಾವು ಹೇಡಿಗಳ್ಹಾಗೆ ಅವರ್ಕೈಲೇನಾದ್ರೂ ಜುಟ್ಕೊಟ್ಟು ಬಿಟ್ರೋ, ಪೂರಾಹಿಡಿದು ಬಗ್ಸೇ ಬಿಡ್ತಾರೆ ಹೆಂಗಸ್ರು........

ಅಯ್ಯರಿ—ಆಕೆಮಾತ್ರ ಪಿಕಪೇಟ ಸಾರ್........ಏನ್ನಾ...... ಎಲ್ಲ ಪೊಮ್ಮಂಡಾಟಿಕ್ಕು ಅಂಗೆ ಇರುವುತಿಲ್ಲ ಸಾರ್..... ಎಂಗೆ ಅನಿ ಕೇಳಿತೀರೋ....ನಿಮ್ಮ ಪೊಮ್ಮಂಡಾಟಿಕಳು, ಚುಟ್ಟು ಶಿಕ್ಕಿಪಿಟ್ರೊನ್ನಾ ಓಟಿತು ಪಕ್ಕಿಸಿ ಪಿಟ್ರಾರೆ ಅನಿ ಪಳಿತಿರಲ್ಲವಾ? ನಂಬ ಪೊಮ್ಮಂಡಾಟಿಕಳ ಕೈಲೆ ಚುಟ್ಟು ಶಿಕ್ಕಿತರೆ ಅವರ್ ಒಟನೆಯೇ ಕತ್ತರೀಲಿ ಕತ್ತರಿಶಿವುಟ್ಟು ಟೋಪ್ ಪಣ್ಣಿವುಟ್ಟು ನಾಟಕತ ಕಂಪೆನೀಕಿ ಮಾರಿವುಟ್ಟು ತುಟ್ಟು ಎಡತ್ ಕೊಳ್ವಾರೆ ಸಾರ್....ತುಟ್ಟು.... ಕೊತ್ತಾಯ್ತಾ?....ಅದಕೆದಾ ನಂಬ ಜನಕಳು "ಟಫ್ಟ್" ವೆಚ್ಚಿಕೊಂಟಿರುವತು.

ಉಪದ್ರವಯ್ಯ—ನಿಮ್ಜುಟ್ಟು ಕತ್ತರ್ಸಿ ಮಾರಿದ್ದುಡ್ಡು ನಿಮ್ಗೇ ಕೊಡ್ತಾರೋ ಇಲ್ಲಾ ಅದ್ನೂ ಕತ್ತರಿಸ್ಬಿಡ್ತಾರೋ?

ಅಯ್ಯರಿ—ನಂಬ ಪ್ರೊಪ್ರೈಟರ್ ಕಳು ರೊಂಬ ಬಿಸಿನೆಸ್ ಮೈಂಡೆಡ್ ಉ ಸಾರ್....ತೆರಿಯುಮಾ?

ಉಪದ್ರವಯ್ಯ— ಓ ! ನಿಮ್ಮಂಗಸ್ರು ಬಿ ಸಿ ನೆ ಸ್ ಬೇರೆ ಮಾಡೋದೂ ಉಂಟೋ?

ಅಯ್ಯರಿ—ನಿಮ್ಮ ಎಂಕಸರಂಗೆ ಕಾಲೇಜಿಕೆ ಓ ತ ರೂ, ಕೆಲಸಂ ಪಣ್ಣತೆ ಇರುವತಿಲ್ಲ ಸಾರ್ ನಂಬವರ್........ ಈಕ ನೋಟಿ, ಅಪ್ಪಳಂ ಪಣ್ಣುತಾರೆ, ಶಂಡಿಕೆ, ಶಾವಿಕೆ ಪಣ್ಣುತಾರೆ .......ಅಂಗಿಂಪ ಮಶಾಲೆಪುಡಿ ಇತು ಎಲ್ಲ ಪಣ್ಣುವತಿಲ್ಲವಾ ಸಾರ್?

ಉಪದ್ರವಯ್ಯ—ಹಾಗಾದ್ರಿದಿಷ್ಟೇ ಸಂಪಾದ್ನೇಗೆ ಮಾರ್ಗ?

ಅಯ್ಯರಿ—ಇದ್ವಾನಾ.... ...? ಅ........? ಚೆಂದಾಕಿ ಕೇಳಿ ತಿರಿ....... ನಂಬ ಪಾಟಿ ಇತ್ತರಲ್ಲಾ........ಅವರಕೂ, ನಮಕೂ ಶಂಡೆ ಆಕಿ ಅವರು ಅಮೆರಿಕಾಕಿ ಓಗಿವುಟ್ಟರೂ ಸಾರ್—ಅಮೆರಿಕಾಕಿ....ಕೊತ್ತಾ? ಅವರ ಕೈ........ ಕೈಸಾರ್, ಉತ್ತಿನವಟಿ— ಸಾಂಬಾರ್ ಅವರ ಕೈ ಕಾಂಬಿನೇಷನ್........ಆಮಾ. ಶಾವುತಾ ಇರೋರಕ್, ನಂಬ ಪಾಟಿ ಪಣ್ಣತ ಉತ್ತಿನವಟಿ–ಸಾಂಬಾರ್ ಕೊಟ ತಿನಿ ಅನ್ನಾ ಅವರ್ ಶಾಯುವತಿಲ್ಲಿ ಪಂತು ಸಾರ್? ಶನಿ ಪತುಕಿ ಪಿಟ್ಟಾನೆ. ಅದ್ವಾ ಏಳಲಿಲ್ಲವಾ ಅವರು ಅಮೆರಿಕಾಕಿ ಓಗಿತ್ತರೂ ಅನಿ....ಅವರು ಒರದಿನಂ ಶಮುದ್ರ ತೀರತ್ತಿಲೆ ಉತ್ತಿನವಟಿಕಿ ಉಪ್ಪು ಪಣ್ಣುವತಕ್ಕೆ ಓಗಿತ್ತರು. ಅಂಗೇ ಇತ್ತರೆ ಒಂದು ಚಿನ್ನ ಅಟಕು ತೇಲಿ ಪಂತು. ನಂಬ ಪಾಟಿ ಅಂಗೇ ನೋಟಿತರು....'ಇದೆನ್ನಡಾ

ಇದಲೆ ಎದೂಂಶತ್ತಮೋ ಕಾಣೊಂ'... ಇನಿ ಅಟಕಿನಲ್ಲಿ ಸೋಟಿತರು.... ತೊಟ್ಟ್ ಮನುಶ್ಯ–ಇನ್ನಾ ಅಂಗೆ ಇತ್ತ್ ಎಟ್ಟ್–ಪತ್ತ್ ಜನಂಗಳ್ ಶಾಪ್ಪುಡಾ ಪಿತ್ತ್ರತ್ತ್ರು. ಅತು ನೋಟಿ ನಂಬ ಪಾಟಿ ಅವರಿಕೆ ತಟ್ಟನೆ ಉತ್ತ್ರನಪಟಿ ಕೊಂಡು ವಂದಾರ್.... ಆಗ ಯೋಚನೆ ಮಾಟಿತರು, ಇವರು ಯಾರಿರಪಹುತು ಅನಿ....... ಅಂಗೇ ಯೋಚನೆ ಮಾಟಿತರೆ ಅವರಿಗೆ ತಟ್ಟನೆ ಕೊತ್ತ್ಾಕಿ ಓಯ್ತು. ಅಡ ಡಾ! ಇವನು ಕೊಲಂಬಸ್ ... ಇವ ಶತ್ತು ಓತರೆ ಆ ಮೇಲೆ ಅಮೆರಿಕ ಯಾರು ಡಿಸ್ಕವರ್ ಪಣ್ಣುವತ್ ಅನಿ ಮೊತಲು ಕೊಲಂಬಸ್ಸಿಕೇ ಉತ್ತ್ರನಪಟಿ–ಸಾಂಬಾರ್ ಕೊಟ್ಟುಪಿಟ್ಟರು .... ಆಮೇಲೆ ಕೊಲಂಬಸ್ ವಾಪಸ್ ಓದಮೇಲೆ, ಅವನು ಅವರ ತೇಶತಲ್ಲಿ ನಂಬಪಾಟಿ ಉತ್ತ್ರನಪಟಿ–ಸಾಂಬಾರ್ ಪೇಶೇ ಪಳಲಿಲ್ಲ ಸ್ವಾಮಿಾ.... ನೋಟಿ ಕಾಲ ಏಕಿತೆ?

ಉಪದ್ರವಯ್ಯ—ಹಾಗಾಪ್ರೆ ನಿಮ್ಮಜ್ಜಿ ಕೊಲಂಬಸ್‌ಗಿನ್ನಾ ಮೊದಲೇ ಅಮೇರಿಕಾಕ್ಕೆ ಹೋಗಿ, ಅಲ್ಲಿ ಹೋಟಲೂ ಇಟ್ಟುಬಿಟ್ಟಿದ್ರೂ ಅನ್ನಿ ?

ಅಯ್ಯರಿ—ಓಟಲಲ್ಲ ಸ್ವಾಮಿಾ....'ಪಾಲಕ್ಕಾಟ್ ಕ್ಲಬ್'.... ಅನಿ ಏಳಿ.

ಉಪದ್ರವಯ್ಯ—ಅಸಾಧ್ಯ....ಅಯ್ಯರೇ ಇದು ಅಸಾಧ್ಯ....

ಅಯ್ಯರಿ—ಅಸಾತ್ಯ....ಅತು ಏಕೆ ಸ್ವಾಮಿಾ?.... ನೆಪ್ಪೋಲಿಯನ್ ಡಿಕ್ಷ್ನರೀಲೆ ಇಂಪಾಸಿಪಲ್ ಅನಿಏಳುವ ವರ್ಡ್ಡೇ ಏಗೆ ಇರಲಿಲ್ಲವೊ ಅತೇ ಮಾತ್ರಿ ಪ್ರೀಫೇಸ್‌ಲೆ ಇಂದ

ಎರಾಟಾ (errata) ವರ್ಕ್ಕು ಎಲೆಕ್ಟ್ರಿಕ್‌ಲೈಟ್ ಇಟ್ಟಿತ್ತು ನೋಟಿತರೂ ನಂಬ ಅಯ್ಯ್ರರ್ ಡಿಕ್ಷ್ನರೀಲೆಯೂಂ ಅಸಾತ್ತ್ಯ ಎನ್ನುವ ಪೇಶೇ ಕಡೆಯಾದ್ ಸ್ವಾಮಿ....

ಉಪದ್ರವಯ್ಯ—ಹಾಗೇನು?

ಅಯ್ಯ್ರರಿ—ಅಲ್ಲತೆ ಏನು ಸ್ವಾಮಿ.... ಈಕ ನೋಟಿ.... worldನಲ್ಲಿ ಎಂಪ city, nook-cornerನಲ್ಲಿ ಓಗಿ ಕೇಳಿ, ಅಲ್ಲೆಲ್ಲ ಅಯ್ಯ್ರರಿದಾ ಡಾಮಿಸೈಲ್ ಆಕಿ ಓಗಿದ್ದಾರೆ.... ಎಂದ ಸ್ಟೇಟ್ ಆಫೀಸರ್, ಇಂಟರ್ ನೇಷನಲ್ ಫಿಗರ್, ಇಂದ ಇಟಿತು ಓಟಲ್ ಸಪ್ಲೈಕಾರನವರೆಕೂ ನೋಟಿ ಅಯ್ಯ್ರರಿಕಳೇ ನಿಮುಕೆ ಶಿಕ್ಕುವತು.

ಉಪದ್ರವಯ್ಯ—ಅಬ್ಬಾಡಿ....!

ಅಯ್ಯ್ರರಿ—ಅಬ್ಬಾಡಿಯೂಂ ಇಲ್ಲ ಅಮ್ಮಾಡನೂ ಇಲ್ಲ ... ಏನು ಆಕಂತರೆ.... ಕೊಂಚ ಕಾಲತ್ತ್‌ಕ್ಕ್‌ಮುನ್ನೆ Mount Everest Expedition ಓಗಿತ್ತರಲ್ಲ, ಆಕ ಮೇಲೆ ಅವರು ಓಗತಾ ಓಗತಾ ಒಂದು ಕಟಿ ಅವರಿಗೆ ಸುಸ್ತಾಕಿ ಇನ್ನು ಅಲ್ಲಿಂದಮೇಲೆ ಓಗುವತು ಅಸಾತ್ಯ ಅನಿ ಪಿತ್ತು ಪಿಟ್ಟರು. ಆಗ ಅವರಿಕಿ ಸಡನ್ ಆಕಿ "ಶುಡು-ಶುಡು ಕಾಫೀ" ಅನಿ ಯಾರೊ ಕತ್ತಿದ್ದು ಕೇಳಿಸಿಟ್ಟು. ಅಲ್ಲಿಂದ ಶುಶ್ತಾಗಿತ್ತವರೆಲ್ಲಾ ಒಟನೆಯೇ ಎತ್ತು ಬರ್ರನೆ ಮೇಲೇರಿ ಓಗಿ ನೋಟ್ತಾರೆ.... 'ಪಾಲಕ್ಕಾಟ್ ರೆಸ್ಟೊರಾಂಟ್' ಅನಿಪೋರ್ಡು ಹಾಕಿತೆ.... ಒಳಕೆ ಓಗೆ ನೋಟಿತರೆ ನಂಬ ತೋಪಸಾರ್ ನಾಲು ಫುಲ್‌ಕಪ್ ಫಸ್ಟ್‌ಕ್ಲಾಸ್ ಶುಡು ಕಾಫಿ ಕೊಂಡಂಪು ಕುಡ್ತಾರ್.... ಅದು ಕುಟಿತ ಒಡ

ನೆಯೇ Mallory—Irwin ರಂಡು ಪೇರು ನಲ್ಲಕಾಫಿ ಶಿಕ್ಕಿ ರಿಜುವಿನೇಟ್ ಆಗಿಪಿಟ್ಟು ಅನಿ ಇನ್ನೂ ಮೇಲೇರಿ ಓಗಿ ಬಿಟ್ಟೇವಿ ಅನಿ ಓತರು.......ನಂಬ ತೋಪನಾರ್ "ಅಯ್ಯಾ....ಈಕ ಪೇಟಿ, ನಾನು ನಾಳೆ ಪೆಳಿಕ್ಕೆ ಶೂರ್ಯ ನಮಶ್ಕಾರಂಪಣ್ಣುವುತಕ್ಕೆ ಕೌರಿಶಂಕರತ್ತ್ಕೆಓಗತೀನೀ.... ಆಕ ನನ್ನೊಟನೆ ಪನ್ನಿ. ಸಲೀಸಾಕಿ ಕರಕೊಂಟು ಓಗ ತೀನಿ; ಈಕ ಪೇಟ, ನರೆಯಾ ಕ್ಲೌಟ್ ಪರ್ರ್ತೆ" ಅನಿ ಏಳಿತರೆ ಅವರು ಕೇಳಪೇಕಿಲ್ಲವಾ........ಗಮ್ಮನೆ ಓಗಿ ಪಿಟ್ಟ; ನಂಬ ತೋಪನಾರ್, ಓಡೆಲ್, ನಾರ್ಟನ್ ಇವಾ ಎಲ್ಲಾ ಅಂಗೇ ನೋಟತಾ ನಿಂದಿಕೊಂಟಿರೋವಾಕ ಕ್ಲೌಟು ಪಂತೇ ಪಿಟ್ಟಿತು...........ಒಂದು ಕ್ಷಣ ತ್ತಿ ಲೆ Mallory-Irvin ರೆಂಡು ಪೇರೂಂ ಅಂದ ಕ್ಲೌಟಿ ನಲ್ಲಿ ಅವರೂ ಕ್ಲೌಟಾಕಿ ಓಗಿಯೇ ಪಿಟ್ಟರು. ಉಳಿತ ವರನ್ನ ನಂಬ ತೋಪನಾರು, " ಊರಿಕೆ ಓಗಿ ಇಂ ಗಾಯ್ತು ಅನಿ ಏಳಿಪಿಡಿ" ಅನಿ ವಾಪಸ್ ಮಾಟಿಪಿ ಟ್ಟರು. ಇತಾತ ಕೊಂಚ ಮಾಸತಲ್ಲಿ ನಂಬ ತೋಪನಾ ರಿಕಿ ಒರ Epic of Mount Everest ಪುಸ್ತ ಕಂ ಕಡಚಿಪಿಟ್ಟಿತು. ಅತರಲ್ಲಿ ಎಲ್ಲಿ ನೋಟಿತರೂ ನಂಬ ತೋಪನಾರ ಓಟಲ್ ಎಸರೇ ಆಂಬಡಲಿಲ್ಲ. ಅತರಿಂತ ಅವರಿಕಿ Heart failure ಆಕಿ ಅಂಗೇ ಶತ್ತು ಪೋಗಿಪಿಟ್ರು....ಇದೇ ಮಾತ್ರಿ ಇಂಗೇ ನಮಿಕೆ ಬಿಸಿನೆ ಸ್‌ಲೆ ರೊಂಬ ಲಾಸ್ ಆಕಿಪೋಯ್ತು...........ಇಂದೆ, ತುಂಬ ಇಂಪೆ, ನಂಬ ಚಿತ್ತಪ್ಪ ಮಹೆಂಜದಾರೊ— ಹರಪ್ಪತ್ತಲೆ ಓಟಲ್ ಪೆಚ್ಚುವುಟ್ಟು ಆಮೇಲೆ ಸ್ವಂತ

ಕಟ್ಟಡಂ ಕಟ್ಟಿಸಿವುಟ್ಟರು........ಅಂಗೇ ಆಮೇಲೆ ಕೊಂಚಕಾಲತ್ತಿಲೇ ನಂಬ ಚಿತ್ತಪ್ಪ ತಾಪತ್ರಯಂ ಅಯ್ಯರಿತ್ತರಲ್ಲಾ ಅವರಿಕೆ ಏನೋ ತಾಪತ್ರಯ ಆಕಿಪಿಟ್ಟು ಪತ್ತಾವೇ ಇಲ್ಲಾದೆ ಓಗಿಪಿಟ್ಟರು.........ಅದೇ ನೋಟಿ ಮೊನ್ನೆ ಅಲ್ಲಿ ಏನೋ ಎಂಚು-ಗಿಂಚು Tablet ಎಲ್ಲಾ ಕಡಚಿತಂತೆ ...ಅದೆಲ್ಲಾ ನಂಬ ಚಿತ್ತಪ್ಪಾವರ್ ಓಟಲ್ ಕಟ್ಟಡತ್ ದಾ. ಅತು ಆಯಿತೋ........ಈಗ ನಾನು ನೋಟಿ. ಇಲ್ಲಿಗೆ ಪಂತೆ....ನೋಟಿ........ಇಲ್ಲಿ ಎಲ್ಲಾ ಉಡುಪಿ ಓಟಲು........ಒಣ್ಣೂ ಪಾಲಕ್ಕಾಟ್ ಅಯ್ಯರಿ ಓಟಲು ಕಡೆಯಾದ್....ನಾನು ಒಂತು open ಮಾಡಿ ವುಟ್ಟೆ....ಈಗ ಗಿರಾಕಿ ಎಚ್ಚೇಸಿಲ್ಲ ...... ಆದ್ರೆ ನಾನೂ ಮೀಶೆ ಒಂತು ವೆಚ್ಚಿಕೊಂಡು ಪಿಟ್ಟರೆ ಎಲ್ಲರೂ ಆಮೇಲಿ ಎನ್ನನೇ ಉಡುಪಿ ಓಟಲುಕಾರ ಅನಿ ನೆನಚಿಕೊಂಡು ಪಿಟ್ಟು, ನನ್ನ ಓಟಲಿಕೇ ಕುರಿಕಳ ಆಕೆ ನುಕ್ಕಿಪಿಟ್ರಾರೆ ........ಔತೋ ಅಲ್ಲವೊ?

ಉಪದ್ರವಯ್ಯ—ಸರಿ....ಇಷ್ಟೆಲ್ಲಾ ಒಂದು Family of Hotel keepers ಆಯ್ತಲ್ಲಾ ನಿಮ್ಮಗನ್ನ ಯಾಕೆ ಹಾಗೆ ಬಿಟ್ಟು ಬಿಟ್ರಿ....ಇನ್ನೂ ಚಿಕ್ಕೋನೂಂತ್ಲೋ?

ಆಯ್ಯರಿ—ಛೆ! ಛೆ! ಅಪ್ಪಡಿಯಲ್ಲ ಸ್ವಾಮಿ. ಅವನಿಕೆ ಆಕಲೆ ಹೋಟಲ್ ಎಜ್ಯುಕೇಷನ್ ಕೋರ್ಸ್ ಕಂಪ್ಲೀಟ್ ಆಗಿ ಓಯ್ತು....

ಉಪದ್ರವಯ್ಯ—ಹಾಗಾದ್ರೆ ಅವನ್ನ ಸಹರಾಗೆ ಕಳ್ಸಿ ಹೋಟ್ಲಿಡಸ್ಬಿಡಿ........ಸರಿಹೋಗತ್ತೆ.

ಅಯ್ಯರಿ—ಛೆ! ಅಲ್ಲಿ ಗಿರಾಕಿ ಕಟಿಮೆ ಸ್ವಾಮಿ ಕಡಂ ಜಾಸ್ತಿ ....ನಂಬ ಉಟಕನ್ನ ಅಂಟಾರ್ಕ್ಟಿಕ್ ರಿಜಿಯ್ನ್....ಅತೇ ....ಇಂದ ಸೌತ್‌ಪೋಲ್‌ಲೇ ಓಟಲ್ ಬಿಸಿನೆಸ್‌ಕಿ ಆಕಿ ಪಿಟ್ಟೇನೆ....ಇತೆಲ್ಲ ಯಾಕೇ ಎಳಿತೇಂತೀರೋ ಎಂಗಸರ ಮಾತಿಕೆ ಇತೆಲ್ಲಾ ಪಂತುನೋಟಿ .... ಏನುಪಣ್ಣಪೇಕು ಅನಿ ಏಳಿತರೂ ಪೊಮ್ಮಂಡಾಟಿಕಳಿಲ್ಲತೆ ಎದೂಂ ಆಕು ವತೇ ಇಲ್ಲಾ .... ಅವರಿಂದ ದಾ ಪ್ರಪಂಚ ಇರುವತು. ಆವರಿಲ್ಲಾದೆ ಶಮೋಲು ಯಾರು ಸ್ವಾಮಿ ಪಣ್ಣುವತು?

ಉಪದ್ರವಯ್ಯ—ಈಗ್ನಾನೇ ಮಾಡ್ಕೋತಾ ಇಲ್ವೇ? ಆದೆ ಲ್ಲಾ ನಾನೊಪ್ಪೋದಿಲ್ಲಾ ಬಿಡಿ....

ಅಯ್ಯರಿ—ಅಡಡ!....ಈಕ ನಿಮಿಕೆ ಪ್ರಾಕ್ಟೀಸ್ ಇತ್ತರ ಲ್ಲವಾ ಮಾಸತಲ್ಲಿ ಮೂಣು ದಿನಂಗಳೂ ಶಮೋಲು ಪಣ್ಣುವತಕ್ಕೆ ಪರುವತು. .... ಅದಕೆ ದಾ ತೊಟ್ಟವರು ಏಳುವತು ಈಕಿನ ಕಾಲತವರಿಕೆ ತಲೇಯೆ ಇಲ್ಲಾ ಅನಿ. ಉಂ!....ಓಗಲಿ....ಮಡ ಮಡ ಪನ್ನೀ ...ವೊತ್ತಾಯಿತು ....ಪನ್ನಿ....ನಿಮಿಕೆ ಈಕ ಎಂಗೆ ಕೊತ್ತಾಕಪೇಕು........ ಊರೂರು ಶುತ್ತಿ ಶುತ್ತಿ ಇತ್ತರಲ್ಲವಾ ಕೊತ್ತು........ ಪನ್ನಿ........

ಉಪದ್ರವಯ್ಯ—ಒಟ್ನಲ್ಲಿ ನಿಮ್ಮಂಥೋರಿಗೆ ಪೆವರ್ಕ್ಲಂಡೇ ಮಳೇ ಬೆಳೇ ಎಲ್ಲಾ ನಿಂತ್ಹೋಗಿರೋದೂಂತ್ಕಾಣತ್ತೆ— ನಡೀರಿ.

[ಇಬ್ಬರೂ ನಿಧಾನವಾಗಿ ಮರೆಯಾಗುತ್ತಿರುವಂತೆ ತೆರೆಯುರುಳುವುದು]

---

# ದಂಡ

## (ಐದು ದೃಶ್ಯಗಳು)

●

### ದೃಶ್ಯ ೧.

[ಬೀದಿಯಲ್ಲಿ ಒಬ್ಬ 28—29 ವಯಸ್ಸಿನ ಯುವಕನು ಅಲ್ಲಿಂದಿಲ್ಲಿಗೆ-ಇಲ್ಲಿಂದಲ್ಲಿಗೆ ಅಸಹನೆಯಿಂದ ಓಡಾಡುತ್ತ ಒಮ್ಮೊಮ್ಮೆ ನಿಂತು ಕೈಗಡಿಯಾರವನ್ನು ನೋಡಿ, ಉತ್ಸುಕನಾಗಿ ದಾರಿಯ ಒಂದು ಪಾರ್ಶ್ವವನ್ನು ಗಮನಿಸಿ, ಉತ್ಸಾಹ ಕುಂದಿ ಮತ್ತೆ ಅಸಮಾಧಾನದಿಂದ ಮೊದಲಿನಂತೆ ಓಡಾಡುತ್ತಲಿರುವನು. ನೋಡುವುದಕ್ಕೆ ಸುಂದರ. ಉಡುಪೂ ಉತ್ತಮ. ಮುಖವನ್ನು ನೋಡಿದೊಡನೆಯೇ ವಿಷಯಾಸಕ್ತನೆಂದು ಸೂಚಿಸುವಂತಹ ಮುಖಕಾಂತಿ. ಕೈಯಲ್ಲೊಂದು ತುಂಡು ಕಾಗದದಲ್ಲಿ ಸುತ್ತಿದ ಕಲಾಬತ್ತಿನ ಸೀರೆ. ಪಕ್ಕದಿಂದ 14—15 ವಯಸ್ಸಿನ ಸುಂದರ ಮಲಿನ ವಸ್ತ್ರಧಾರಿ ಹುಡುಗಿಯೊಬ್ಬಳು ಓಡಿಬಂದು, ತಟ್ಟನೆ ನಿಂತು ಯುವಕನ ಕೈಹಿಡಿದು, ಹಿಂತಿರುಗಿ ಬಂದ ದಾರಿಯನ್ನು ಭಯದಿಂದ ನೋಡಿ, ಮತ್ತೆ ಯುವಕನ ಕಡೆ ತಿರುಗುವಳು.]

ಯುವಕ—ಏಕೆ ನಳಿನಾ .....ಇಷ್ಟು ಹೊತ್ತು ಕಾಯಿಸಿದೆ?

ನಳಿನಾ—ಮಾತನಾಡಲು ಈಗ ವೇಳೆಯಿಲ್ಲ—ದಯವಿಟ್ಟು ಹೊರಟುಹೋಗಿ.... ...ನಾಳೆ ... ..

ಯುವಕ—ಎಷ್ಟು ಹೊತ್ತಿನಿಂದ ನಿನಗಾಗಿ ಕಾದಿದ್ದೆ ಗೊತ್ತೆ?.... .......

ನಳಿನ—ಗೊತ್ತು....ನೀವು ಬಂದದ್ದನ್ನು ಆಗಲೇ ಕಿಟಕಿಯಿಂದ ನೋಡಿದೆ ......ಆದರೇನು ಮಾಡಲಿ....ನಾಳೆ

ಸಾಧ್ಯವಾದರೆ ಬೇಗ ಬರುತ್ತೇನೆ; ಈಗ ಹೊರಟು ಹೋಗಿ........

ಯುವಕ—ಇದನ್ನು ಹೇಳಿಕೊಳ್ಳ ಇಷ್ಟು ಹೊತ್ತು ನನ್ನನ್ನು ಕಾಯಿಸಿದ್ದು?

ನಳಿನ—ಇಲ್ಲ........ಇಲ್ಲ........ನಿಮಗರ್ಥವಾಗುವುದಿಲ್ಲ ... ಅಮ್ಮನು ಸಂಶಯಪಟ್ಟಂತೆ ಕಾಣುತ್ತೆ.....ಈ ಎರಡು ಮೂರು ದಿನದಿಂದ ನನ್ನ ಪ್ರತಿ ಚಲನೆಯನ್ನೂ ಕಾಯುತ್ತಿದ್ದಾಳೆ...............ನನಗೇಕೋ ಭಯವಾಗುತ್ತಿದೆ. ........ಒಂದೊಂದು ಸಲ ಅವಳ ತೀಕ್ಷ್ಣದೃಷ್ಟಿಯನ್ನು ಕಂಡು ಉಸಿರೇ ನಿಂತುಕೊಂಡಂತಾಗುವುದು....

ಯುವಕ— ಹಾಗಿದ್ದರೆ ಕೇಳು ನಳಿನಾ.... ನನ್ನೊಡನೆ ಈಗ— ಈಕ್ಷಣ ಹೊರಟು ಬಾ ....... ನಿನ್ನ ಮನಸ್ಸಿಗೊಪ್ಪುವ ಒಡವೆ– ವಸ್ತ್ರಗಳನ್ನು ತೆಗೆದುಕೊಡುತ್ತೇನೆ; ನಿನಗಾಗಿ ಒಂದು ಮನೆ ಮಾಡುತ್ತೇನೆ........ಆ ಮನೆಯ ಯಜಮಾನಿಯಾಗಿರುವೆಯಂತೆ........ನೀನು ನೋಡಲಪೇಕ್ಷಿಸುವ ಊರುಗಳನ್ನೆಲ್ಲ ನಿನಗೆ ತೋರಿಸುವೆನು.....ಇದಕ್ಕಿಂತಲೂ ನಿನಗೆ ಹೆಚ್ಚೇನು ಬೇಕು.... ನಳಿನಾ?....

ನಳಿನಾ—ಆ ಮಾತು ಈಗ ಬೇಡ....ನೀವೀಗ ದಯವಿಟ್ಟು ಹೋಗಿ.... ಸ್ವಲ್ಪ ಯೋಚಿಸಲು ಅವಕಾಶಕೊಡಿ........

ಯುವಕ—ಈ ಮಲಿನ ವಸ್ತ್ರಗಳನ್ನು ಧರಿಸಿ, ಅರೆಹೊಟ್ಟೆ ತಿಂದು, ತಾಯಿ ಕೊಟ್ಟ ಹಿಂಸೆಗಳನ್ನೆಲ್ಲ ಸಹಿಸಿಕೊಂಡಾದರೂ ಈ ನರಕದಲ್ಲಿರಬೇಕೆಂಬಾಸೆಯೇ?.... ನಳಿನಾ....

ಎಲ್ಲ ಹುಡುಗಿಯರಂತೆ ನಿನ್ನನ್ನು ಜೀವನದ ಸವಿಯನ್ನನುಭವಿಸಗೊಡದೆ, ನಿನ್ನ ತಾಯಿಯು ತನ್ನ ಸ್ವಾರ್ಥಕ್ಕೆ ಬಲಿ ತೆಗೆದುಕೊಳ್ಳುತ್ತಿರುವಳು.... ......ಹೊರಟು ಬಾ ನಳಿನಾ ...ಏಕೆ ಅನುಮಾನಿಸುವೆ ?

ನಳಿನ--(ತಲೆಯಾಡಿಸಿ).... ...ಇಲ್ಲ ...ಇನ್ನೆರಡು ದಿನ ತಾಳಿ .... ...ನನ್ನ ತಾಯನ್ನು ಹೀಗೆ ಏಕಾಕಿ ಬಿಟ್ಟು ಬರಲು ಹೃದಯ ಒಪ್ಪದು. ಅಮ್ಮ ನನ್ನೊಡನೆ ಕಠಿಣ ರೀತಿಯಲ್ಲಿ ವರ್ತಿಸಿದರೂ ಅನ್ಯಾಯವಲ್ಲ. ಅವಳ ಹೃದಯವು ನನಗಾಗಿ ಪ್ರೀತಿಯಿಂದ ತುಡಿದುಕೊಳ್ಳುತ್ತಿರದೆ ?........ ಇಲ್ಲದಿದ್ದರೆ ನನ್ನನ್ನು ಸಾಕಿ--ಸಲಹಿ ಇಷ್ಟು ದೊಡ್ಡವಳನ್ನೇಕೆ ಮಾಡುತ್ತಿದ್ದಳು ....

ಯುವಕ--ಹಾಗೆ ಪ್ರೀತಿಯಿದ್ದರೆ... .. ನೀನು ಬಯಸಿದುದನ್ನು ಕೊಡಲು ಪ್ರಯತ್ನಿಸದೆ ನಿನ್ನನ್ನು ವಂಚಿಸಿ, ಒಬ್ಬ ಭಿಕ್ಷುಕಿಯಂತೆ ನಿನ್ನನ್ನು ಬೆಳೆಸುತ್ತಿರುವುದೇಕೆ....?

ನಳಿನ—ನೀವು ಹೇಳುವುದರಲ್ಲಿ ನಿಜವಿರಬಹುದು........ ಆದರೆ ...ಇನ್ನೂ ಎರಡು ದಿನ ...

ಯುವಕ—ಆಗದು ನಳಿನ—ಈ ಘಳಿಗೆ ನೀನು ನಿಶ್ಚಯಿಸಬೇಕು ... ...ನಾನಿನ್ನು ಹೆಚ್ಚುಕಾಲ ಕಾಯಲಾರೆ........ ನಮ್ಮ ಪ್ರಯಾಣಕ್ಕೆಲ್ಲವನ್ನೂ ಸಜ್ಜುಗೊಳಿಸಿ ಬಂದಿದ್ದೇನೆ ... ...ಈಗ ನಿರಾಕರಿಸಿದರೆ ...ನೀನು ಮತ್ತೆ ನನ್ನನ್ನು ನೋಡಲಾರೆ....ಆಜನ್ಮ ಕೊರಗುವುದು ನಿನ್ನ ಪಾಲಿಗೆ ಬೀಳುವುದು .. .. ಏನು ನಳಿನಾ ?

ನಳಿನ—(ಹೃದಯವನ್ನು ಕಲ್ಲುಮಾಡಿ) ....ಆಗಲಿ ಬರುತ್ತೇನೆ.

ಯುವಕ— (ಸಂತೋಷದಿಂದ) ಹಾಗಾದರೆ ಬೇಗಹೋಗಿ ಈ ಸೀರೆಯನ್ನುಟ್ಟು ಬಾ ..........ನಾನಿಲ್ಲೇ ಮರೆಯಲ್ಲಿರುತ್ತೇನೆ........(ಎಂದು ಕೈಲಿದ್ದ ಸೀರೆಯನ್ನು ಕೊಡುವನು. ಸೀರೆಯನ್ನು ನೋಡಿ ಹರ್ಷಿತಳಾಗಿ, ಮೆಲು ನಗೆ ನಕ್ಕು ಅದನ್ನು ತೆಗೆದುಕೊಂಡು ನಳಿನಳು ಓಡಿಹೋಗುವಳು. ಯುವಕನು ಅವಳು ಹೋದೆಡೆಯಲ್ಲೇ ನೋಡುತ್ತಾ ಸಂತುಷ್ಟನಾಗಿ ಅದೇ ಪಾರ್ಶ್ವ ಮರೆಯಾಗುವನು.)

---

" ದೃಶ್ಯ ೨ "

[ನಳಿನಳ ಕೊಠಡಿಯಲ್ಲಿ. ಒಂದು ಭಾಗದಲ್ಲಿ ಬಾಗಿಲಿನ [illegible]ದಲ್ಲಿ ಒಂದು ಪೆಟ್ಟಿಗೆ. ಪೆಟ್ಟಿಗೆಗಾಚೆ ಒಂದು ಹಲಗೆಯ ಮಂಚ. [illegible]ದರ ಮೇಲೊತ್ತಟ್ಟಿಗೆ ಒಂದು ಹಾಸಿಗೆಯನ್ನು ಸುತ್ತಿರಿಸಿದೆ. ಮಂಚದ ಮಗ್ಗುಲಿಗೆ ಸಾಧಾರಣಮೇಜು ಅದರ ಮೇಲೆ ಕೆಲವು ಪುಸ್ತಕಗಳು, ಶಾಯಿಕುಡಿಕೆ, ರೂಲರ್ ಇತ್ಯಾದಿ. ಮೇಜಿನ ಮಗ್ಗುಲಿನಲ್ಲಿ ಕಿಟಕಿಯಿದೆ. ಆ ಕಿಟಕಿಯ ಮುಖಾಂತರ ಏನನ್ನೋ ನೋಡುತ್ತ ನಳಿನಳ ತಾಯಿ ಮೈಮರೆತಿದ್ದಾಳೆ ಮುಖಮುದ್ರೆಯು ಕ್ರೂರವಾಗಿದೆ. ವಯಸ್ಸು ೩೫-ರಿಂದ ನಲವತ್ತರೊಳಗೆ. ಸೀರೆಯನ್ನು ಎದೆಗವಚಿಕೊಂಡು ನಳಿನಳು ಹಿಂದು ಹಿಂದಕ್ಕೆ ಬಹಳ ಎಚ್ಚರಿಕೆಯಿಂದ ಬಂದು ತಿರುಗುವಾಗ ತಾಯಿಯನ್ನು ಕಂಡು ಬೆದರಿ ಸರಕ್ಕನೆ ಸೀರೆಯನ್ನು ಬೆನ್ನ ಹಿಂದೆ ಮರೆಮಾಡಿಕೊಳ್ಳುವಳು. ತಾಯಿಯು ನಳಿನಳ ಕಡೆ ನೋಡದೆಯೇ .....]

ತಾಯಿ—(ಗಂಭೀರವಾಗಿ) ಪುನಃ ಆತನನ್ನು ನೋಡಿ ಬಂದೇ?

ನಳಿನ—(ನಿರುತ್ತರ ಮುಖವು ಬಿಳುಪೇರಿ, ತುಟಿಗಳು ಕಂಪಿಸುತ್ತಿರುವುವು. ದೃಷ್ಟಿಯು ತಾಯಿಯ ಮೇಲೆ ನೆಲೆಸಿರುವುದು. ತಾಯಿಯು ಮೆಲ್ಲನೆ ತಿರುಗಿ ನಳಿನಳನ್ನು ಸಮೀಪಿಸಿ]

ತಾಯಿ—ಮಾತನಾಡೋದಿಲ್ಲೇಕೆ ? ಬಾಯಿಲ್ಲವೇ ?...........

ನಳಿನ—(ತಿರಸ್ಕಾರ ಧ್ವನಿಯಲ್ಲಿ)....ಹೌದು .. ನೋಡಿದೆ ...

ತಾಯಿ—... ಏನದು ...ಹಿಂದೆ ಮುಚ್ಚಿಕೊಂಡಿರುವುದು ?

ನಳಿನ—....ನನಗೆ ಸಂಬಂಧಿಸಿದ್ದು....

ತಾಯಿ—(ನಳಿನಳ ಭುಜಹಿಡಿದು ತಿರುಗಿಸಿ, ಸೀರೆಯನ್ನು ಕಿತ್ತು ತೆಗೆದುಕೊಂಡು ನೋಡಿ) ...ಓಹೊ! ಈ ಮಟ್ಟಕ್ಕೆ ಬಂದಿದೆಯೋ ?....ಎಂದಿನಿಂದವನ ಸೂಳೆಯಾದೆ ?....(ಸೀರೆಯನ್ನು ಕೆಳಗೆಸೆಯುವಳು )

ನಳಿನ—(ಕೋಪ-ಅಸಹ್ಯಗಳಿಂದ) ...ಅಮ್ಮಾ?....ಹಾಗೆನ್ನಲು ನಿನಗೆ ಮನಸ್ಸಾದರೂ ಹೇಗೆ ಬಂತು ?....

ತಾಯಿ—ಈಗಾಗಲೇ ಆಗಿರದಿದ್ದರೆ ಮುಂದಾಗುವೆ....

ನಳಿನ—(ತಿರಸ್ಕಾರವಾಗಿ)....ನೀನು ಮನುಷ್ಯಳಲ್ಲ.....ಹಾಗಿದ್ದಿದ್ದರೆ ನೀನೀ ರೀತಿ ಮಾತನಾಡುತ್ತಿರಲಿಲ್ಲ..........ನಿನ್ನೀ ಹೃದಯವು ಕಟುಕನ ಹೃದಯಕ್ಕಿಂತಲೂ ಕಲ್ಲು...... ನೀನು ಪ್ರೇಮವನ್ನು ಕಂಡರಿಯೆ............... ನಾವಿಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸುತ್ತೇವೆ..........

ತಾಯಿ ನನಗಿಂತಲೂ ನಿನಗೆ ಹೆಚ್ಚು ಗೊತ್ತಿರುವ ಹಾಗಿದೆ ?......

ನಳಿನ—ಹೌದು ಗೊತ್ತಿದೆ....ನಾನವರನ್ನು ಅನೇಕ ದಿನಗಳಿಂದ ನೋಡುತ್ತಿದ್ದೇನೆ.......ಅವರ ಹೃದಯವು ನಿನ್ನ ಹೃದಯದಂತೆ ಕಠಿಣವಲ್ಲ........ಅದು ನನಗಾಗಿ ಮರುಗುವುದು.............. ನೀನು ನನಗೆ ಜೀವನದಲ್ಲೇನನ್ನು

ವಂಚಿಸಿರುವೆಯೋ ಅವೆಲ್ಲವನ್ನೂ ಅವರು ಕೊಡಲು ಕಾತುರರಾಗಿರುವರು..........

ತಾಯಿ—ವಿವಾಹಿತ ಪತ್ನಿ ಎನಿಸಿಕೊಳ್ಳುವ ಹಕ್ಕೊಂದನ್ನು ಳಿದು, ಮಿಕ್ಕೆಲ್ಲವನ್ನೂ ಕೊಡುವರು.......... ಅಲ್ಲವೇ?

ನಳಿನ—ಅಲ್ಲ.........ಆ ಹಕ್ಕನ್ನೂ ಕೊಡುವರು..... ......

ತಾಯಿ—ಕೇಳಿರುವೆಯಾ?

ನಳಿನ—ನನಗಾಗಿ ಪ್ರಾಣವನ್ನಾದರೂ ಕೊಡುವೆನೆನ್ನುವಾಗ ಅದನ್ನು ಕೇಳಬೇಕಿತ್ತೆ?........

ತಾಯಿ—(ವ್ಯಗ್ರಳಾಗಿ, ನಳಿನಳ ಭುಜಗಳನ್ನು ಹಿಡಿದು ನೆಟ್ಟದೃಷ್ಟಿಯಿಂದವಳನ್ನು ನೋಡುತ್ತಾ) ........ಪಿಶಾಚೀ..... ಪ್ರಾಣ ಕೊಡುವ ಇಂತಹವರನೇಕರು ನಿನ್ನಂಥವರ ಪ್ರಾಣಗಳನ್ನು ನುಂಗಿದ್ದಾರೆ..... ... ... ನೀನೂ ಅವರಲ್ಲೊಬ್ಬಳಾಗಲು ನಾನು ಬಿಡೆ .. .....(ಎಂದು ಅವಳನ್ನು ಒರಟಾಗಿ ತಳ್ಳಿ) .........ತಿಳಿಗೇಡಿ..... ... ಹೆಜ್ಜೆ ಹೆಜ್ಜೆಗೂ ನಿನ್ನಭ್ಯುದಯವನ್ನೇ ಗುರಿಯಾಗಿಟ್ಟುಕೊಂಡು ಬಂದ ಕಷ್ಟಗಳನ್ನೂ ಆದ ಅಪಮಾನಗಳನ್ನೂ ನುಂಗಿ—ಎದೆಗೆಡದೆ ನಿನ್ನನ್ನು ಮಗುವಿನಿಂದ ಸಲಹಿ, ಈಗ ಒಬ್ಬ ದಾ ರಿ ಹೋ ಕ ನ ಭೋಗದ ಬೊಂಬೆಯಾಗಲು ಬಿಡಲೇ.......?......... .... ಅದಕ್ಕಿಂತಲೂ ನಾನೇ ಕೈಯಾರ ನಿನ್ನನ್ನು ಕೊಂದು ಬಿಡುವೆನು........(ಎರಡು ಹೆಜ್ಜೆ ಮುಂದಿಡುವಳು. ನಳಿನಳು ಬೆದರಿ ಮಂಚದಂಚಿಗೆ ಸರಿದು ಪಕ್ಕದ ಮೇಜನ್ನು ಸಮೀಪಿಸಿ, ಅದರ ಮೇಲಿದ್ದ "ರೂಲರ್"ನ್ನು ಕೈಗೆ ತೆಗೆದುಕೊಂಡು ಅದನ್ನು ಜಪ್ಪುತ್ತ)

ನಳಿನ—ಅಮ್ಮಾ .ಜೋಕೆ! ನನಗೆ ನೀನು ಚಿತ್ರಹಿಂಸೆ ಕೊಡುತ್ತಿದ್ದ ದಿನಗಳು ಹಿಂದೆ ಕಳೆದವು.... ನನ್ನನ್ನೊಬ್ಬ ಭಿಕ್ಷುಕಿಯಂತೆ ನೀನು ಬೆಳೆಸಿದೆ ....ಇಲ್ಲಿ ನಿನ್ನೊಡನೆ ಇದ್ದು ಸಂಕಟಪಡುವುದಕ್ಕಿಂತ ಹೊರಗೇ ಭಿಕ್ಷುಕಿಯಂತೆ ಜೀವಿಸಿಕೊಂಡಿರುತ್ತೇನೆ. ನಾನೂ ಜೀವನದಲ್ಲೇನು ಸುಖವಿದೆಯೆನ್ನುವುದನ್ನು ತಿಳಿದುಕೊಳ್ಳುತ್ತೇನೆ..... ಅದರಿಂದ ನಾನು ದೋಷಿಯಾದರೆ ಅದು ನಿನ್ನ ತಪ್ಪು........... ನನ್ನನ್ನು ಹೋಗಗೊಡು....

ತಾಯಿ—(ಕೋಪದಿಂದ ಉನ್ಮತ್ತಳಾಗಿ ಮುಂದೆ ನುಗ್ಗಿ ನಳಿನಳನ್ನು ಹಿಡಿದೆಳೆದು ಮಂಚದಮೇಲಿದ್ದ ಹಾಸಿಗೆಗೊತ್ತಿ ಔಕಿ, ಕುತ್ತಿಗೆ ಹಿಸುಕುತ್ತ) ........ಪಾಪೀ!.... ಹೌದು.... ನೀನು ಕೆಟ್ಟರೆ ತಪ್ಪು ನನ್ನದು.... ಹುಟ್ಟಿದೊಡನೆಯೇ ನಿನ್ನ ಜೀವನವನ್ನು ಸಮಾಪ್ತಿಗೊಳಿಸದೆ ನಿನ್ನನ್ನಿಂದಿನವರೆಗೂ ಉಳಿಸಿ ಸಲಹಿದುದೇ ನನ್ನ ಪಾಪಕ್ಕೆ ನಾನು ಕೊಟ್ಟ ದಂಡ........ ನೀನೂ ಮುಂದೆ ನಿನ್ನ ಅಜ್ಞಾನಕ್ಕೆ ಬೆಲೆ ಕೊಡುವ ದಿನ ಬರುವ ಮುಂಚೆಯೇ ನೀನು ಸತ್ತೆಯೆಂಬ ಸಮಾಧಾನವಾದರೂ ನನಗುಳಿದಿರುವುದು........ (ಎಂದು ಕುತ್ತಿಗೆಯನ್ನು ಕೈಬೆರಳುಗಳಿಂದ ಬಲವಾಗೊತ್ತುತ್ತವಳು. ಆ ಸಂಕಟವನ್ನು ತಾಳಲಾರದೆ ಕೈಲಿದ್ದ "ರೂಲರಿ"ಂದ ಬಲವಾಗಿ ತಾಯಿಯ ತಲೆಗೆ ಹೊಡೆಯುವಳು. ತಾಯಿಯ ಕೈಗಳು ನಳಿನಳ ಕುತ್ತಿಗೆಯಿಂದ ಸರಿದು ಕ್ಷಣಕಾಲ ಸ್ತಂಭಿತಳಾಗಿ ಮಂಚದಮೇಲೆ, ತಲೆಯನ್ನೆರಡು ಕೈಗಳಿಂದಲೂ ಹಿಡಿದುಕೊಂಡು ಕುಳಿತುಕೊಳ್ಳುವಳು. ನಳಿನಳು ತನ್ನ ಕೃತ್ಯದಿಂದ ದಿಗ್ಭ್ರಮೆಗೊಂಡು ಮೆಲ್ಲಮೆಲ್ಲನೆ ಸೀರೆಯೊಡನೆ ಹೊರಟು ಹೋಗುತ್ತಿರುವಂತೆ)

ತಾಯಿ—(ಕಂಗೆಟ್ಟು, ಮಗುವಿನಂತೆ ಅಳುತ್ತ) ........ನಳಿನಾ ..........ನಳಿನಾ..........ಹೋಗದಿರು ಮಗೂ..........ತಪ್ಪಾಯಿತು ನಳಿನಾ..........ಕ್ಷಮಿಸು..........ಹಿಂತಿರುಗು.......... (ಏಳಲು ಹೋಗಿ, ಕಣ್ಣು ಕಪ್ಪಿಟ್ಟು ಕುರುಗುತ್ತ ನೆಲಕ್ಕುರುಳುವಳು. ನೀರುತುಂಬಿದ ಕಣ್ಣುಗಳಿಂದ ನಳಿನಳೊಮ್ಮೆ ನಿಂತು ಹಿಂತಿರುಗಿ ತಾಯಿಯನ್ನು ನೋಡುವಳು.)

ತಾಯಿ—(ಮುಖ ಮುಚ್ಚಿಕೊಂಡು) .. ನಳಿನಾ.... ನಿನಗೆ ಹೇಳಬೇಕಾದ ವಿಷಯವೊಂದಿದೆ.... ಅದನ್ನು ಕೇಳಿ ನಂತರ ನಿನ್ನ ಮನಸ್ಸಿಗೆ ತೋರಿದಂತೆ ಮಾಡು .. (ನಳಿನಳು ಕಣ್ಮರೆಯಾಗುವಳು).... ಮಗೂ.....ಕೇಳದೇ ಹೋಗಬೇಡ.......... (ತಲೆಯೆತ್ತಿ ನಳಿನಳನ್ನು ಕಾಣದೆ)..........ನಳಿನಾ.................. ನಳಿನಾ..................ನ.....ಳಿ.....ನಾ.................. (ನಿರಾಶಳಾಗಿ-ಮುಖ ಮುಚ್ಚಿಕೊಂಡು .......ನರಳುಗುತ್ತಿರುವಂತೆ)

ತೆರೆಯುರುಳುವುದು



## ದೃಶ್ಯ ೩

(ಮೊದಲನೇ ದೃಶ್ಯದಂತೆಯೇ, ಯುವಕನು ಶಿಳ್ಳೆಹಾಕುತ್ತ ಅತ್ತಿಂದಿತ್ತ ಸುತ್ತುತ್ತ ನಳಿನಳ ದಾರಿ ಕಾಯುತ್ತಿದ್ದಾನೆ. ನಳಿನಳು ಭ್ರಮಿಷ್ಟಳಂತೆ ಬರುವಳು ಯುವಕನು ಗಾಬರಿಗೊಂಡು ಬಳಿಸಾರಿ)

ಯುವಕ—(ನಳಿನಳ ಮೈ ಅಲುಗಿಸಿ) .. ಬಟ್ಟೆ ಬದಲಿಸಲಿಲ್ಲ..... ಏಕೆ ನಳಿನಾ.....ಏನಾಯ್ತು ...ಕಣ್ಣೀರೇಕಿಡುತ್ತಿರುವೆ..? (ನಳಿನಳು ಮೌನದಿಂದಿರುವಳು) .. ನಿನ್ನ ಮನಸ್ಸಿನಲ್ಲಿರುವುದೇನು ನಳಿನಾ ....ಮಾತನಾಡದಿದ್ದರೆ ನನಗೆ ಗೊತ್ತಾಗುವ ಬಗೆ ಹೇಗೆ ... .... ....ನನ್ನೊಡನೆ ಬರಲು ಮನಸ್ಸಿಲ್ಲವೇ ...ನಡೆ ನಳಿನಾ ....ನೀನು ಇದುವರೆಗೂ ಕಂಡರಿಯದ ವಸ್ತುಗಳನ್ನು ನಿನ್ನದಾಗಿ ಮಾಡುತ್ತೇನೆ ....... ಮನಸ್ಸಿಗೊಪ್ಪುವ ಮನೆ, ಕಣ್ಣಿಗೊಪ್ಪುವ ಒಡವೆ..... ವಸ್ತ್ರಗಳು.....ಬೇಕಾದಂತಿರಲು ಸ್ವಾತಂತ್ರ್ಯ ..... ಹೆಂಗಸಿಗೆ ಇವಕ್ಕಿಂತಲೂ ಹೆಚ್ಚಾಗಿ ಬೇಕಾದುದು ಯಾವುದಿದೆ? .....ನಿನಗಾಗಿ ಇಷ್ಟೆಲ್ಲವನ್ನೂ ಮಾಡುವೆನು...... ..... ನಳಿನ.....

ನಳಿನ—"ನನ್ನನ್ನಷ್ಟು ಪ್ರೀತಿಸುವಿರಾ?"

ಯುವಕ—ಖಂಡಿತವಾಗಿ....ನಿನಗಾಗಿ ನನ್ನ ಹೃದಯದಲ್ಲಿ ತುಂಬಿರುವ ಪ್ರೇಮವನ್ನು ತೋರಿಸಲು ಸಾಧ್ಯವಾಗಿದ್ದಿದ್ದರೆ ಹೃದಯವನ್ನೇ ಬಿಚ್ಚಿ ತೋರಿಸುತ್ತಿದ್ದೆ....ಅದನ್ನು ನೀನರಿಯೆಯಾ ನಳಿನಾ?

ನಳಿನ—ನಿಮ್ಮ ವಿವಾಹಿತ ಪತ್ನಿಯಾಗುವ ಹಕ್ಕನ್ನು ಕೊಡುವಿರಾ?

ಯುವಕ— (ಚಕಿತನಾಗಿ ನಿರುತ್ತರನಾಗುವನು)

ನಳಿನ—(ಎದೆಯು ಡವಗುಟ್ಟುತ್ತಿರಲು) ...ಕೊಡುವಿರಾ......

ಯುವಕ—(ಉಗುಳು ನುಂಗುತ್ತ) .......ನೀ....ನು............
ಮನಃಪೂರ್ವಕವಾಗಿ ...... ನೀನು...... ....ಅದನ್ನು. ...... .....
ಕೋರುತ್ತಿ.... ದ್ದ......ರೆ

ನಳಿನ —(ಸ್ತಂಭಿತಳಾಗಿ ಅವನ ಸೀರೆಯನ್ನು ಅವನಿಗೇ ಹಿಂದಕ್ಕೆ ಕೊಟ್ಟು ಹಿಂತಿರುಗಿ ಮನೆಯ ಕಡೆ ಹೊರಡುವಳು)

ಯುವಕ—(ಕಳೆಗೆಟ್ಟು) .... ನಳಿನಾ ....... ನಳಿನಾ ... ...
(ಅವಳನ್ನು ತಡೆಯಲು ಭುಜದಮೇಲೆ ಕೈಯಿಡುವನು. ನಳಿನಳು ಕ್ರೂರ ದೃಷ್ಟಿಯಿಂದವನನ್ನು ದಿಟ್ಟಿಸಿ, ಅವನ ಕೈ ಕೊಡ ಹುವಳು. ಯುವಕನು ಪರಾಜಿತ ನಗುಬೀರಿ ಮರೆಯಾಗುವನು. ನಳಿನಳು ಮುಖಮುಚ್ಚಿಕೊಂಡೋಡಿ ಹೋಗುವಳು.

---

## ದೃಶ್ಯ ೪

[ಎರಡನೇ ದೃಶ್ಯದ ಸ್ಥಳ: ತಾಯಿ ಮುನ್ನಿನಂತೆ ಕೊರಗುತ್ತ ನೆಲದಮೇಲೆ ಬಿದ್ದಿದ್ದಾಳೆ ...ನಳಿನಳು ನಿಧಾನವಾಗಿ ಬಂದು ನೆಲವನ್ನಪ್ಪಿ ಅಳುತ್ತಲಿದ್ದ ತಾಯಿಯನ್ನು ನೋಡಿ, ಮೆಲ್ಲನೆ ಅವಳೆಡೆಗೆ ಹೋಗಿ, ಬಳಿ ಕುಳಿತು ಮುಟ್ಟಲಾರದೆ ಮುಟ್ಟುವಳು. ತಾಯಿಯು ಚಕಿತಳಾಗೆದ್ದು ಕುಳಿತು ದೈನ್ಯದೃಷ್ಟಿ ಬೀರಿ, ಮಗಳ ಮುಖವನ್ನೆರಡು ಕೈಗಳಲ್ಲೂ ಹಿಡಿದು ಎದೆಗೊತ್ತಿಕೊಳ್ಳುವಳು. ಬಹು ಶ್ರಮದಿಂದ ತಡೆಗಟ್ಟಿದ್ದ ನಳಿನಳ ಅಳುವು ಈಗ ತಡೆಯಿಲ್ಲದೆ ಉಕ್ಕುವುದು. ತಾಯಿಯು ಮೆಲ್ಲನೆ ಚೇತರಿಸಿಕೊಂಡು ಮಗಳನ್ನು ಸಂತೈಸಲು, ಅವಳ ಮೈದಡವುತ್ತ—]

ತಾಯಿ—ಅಳದಿರು ...ಮಗೂ....ನನ್ನ ಸರ್ವಸ್ವ ನೀನು.... ನೀನು ಕತ್ತಲಿನಿಂದ ನನ್ನನ್ನು ಹೊರಕ್ಕೆಳೆದೆ. ನಳಿನಾ.... ಅಳದಿರು ...ನಿನಗಾಗಿ ಹಗಲೂ-ರಾತ್ರಿ ಶ್ರಮಿಸಿದ್ದೇನೆ. ....ನಿನ್ನ ಮೇಲೆ ನನಗೆ ಪ್ರೀತಿ-ಮಮತೆ ಇಲ್ಲವೆ........? ........ನೀನಿರದಿದ್ದರೆ ಈ ದೇಹವೆಂದೋ ಒಂದು ಹಿಡಿ ಮಣ್ಣಾಗಿ ಹೋಗುತ್ತಿತ್ತು. ಅಳಬೇಡಮ್ಮ...........

(ನಳಿನಳು ಕಣ್ಣೀರೊರೆಸಿಕೊಳ್ಳುವಳು.)

ತಾಯಿ—ನಿನ್ನ ಮೇಲೆ ಪ್ರೀತಿ ಇಲ್ಲದೆ ಇದ್ದೀತೆ ...ನಳಿನಾ? ........ನಾನಷ್ಟು ಕಠಿಣವಾಗಿದ್ದುದಕ್ಕೆ ನಾನನುಭವಿಸಿದ ಕಷ್ಟಗಳು ಕಾರಣ ...ಮಗೂ ...ಅವೆಲ್ಲವನ್ನೂ ನೀನು ತಿಳಿಯಲಾರೆ .......ನಳಿನಾ....ನನ್ನ ಅಜ್ಞಾನಕ್ಕೆ ಬಲು ಭಾರಿ ದಂಡ ತೆತ್ತಿದ್ದೇನೆ ...ನೀನೂ

ನಳಿನ—(ಬೆಚ್ಚಿ, ತಲೆಯೆತ್ತಿ)........ಅಮ್ಮಾ....?

ತಾಯಿ—(ತಲೆದೂಗುತ್ತ) .. ಹೌದು ....ಮಗೂ ... .ನಾನು ತೆತ್ತ ದಂಡದ ಗುರ್ತು.....ನೀನು .......ನನಗಾಗ ನಿನ್ನ ವಯಸ್ಸು. ನಿಮ್ಮ ತಾತನವರು, ನನಗೆ ಕೊಟ್ಟು ಮದುವೆಮಾಡಿಸಬೇಕೆಂದು ಮನೆಯಲ್ಲೊಬ್ಬ ಬಡ ಹುಡುಗನನ್ನು ಸಾಕಿಕೊಂಡಿದ್ದರು. ಅಳಿಯನಿಗೂ ಮಗಳಿಗೂ ತಮ್ಮಾಸ್ತಿಯೊಪ್ಪಿಸಿ ತಾವು ನೆಮ್ಮದಿಯಾಗಿ ಪ್ರಾಣಬಿಡಬೇಕೆಂದಿದ್ದರು. ಅವರಾಸೆ ತೀರಲಿಲ್ಲ. ಹುಡುಗನು ದೊಡ್ಡವನಾಗಿ ದುರ್ಮಾರ್ಗಿಯಾಗಲು ನಿಮ್ಮ ತಾತನು ಆತನನ್ನು ಮನೆಯಿಂದೋಡಿಸಿ ಬಿಟ್ಟರು. ಆಗ ನಾನು ತೀರ ಮುಗ್ಧೆ. ಹುಡುಗನ ಮೋಸಕ್ಕೆ ಬಲಿ

ಬಿದ್ದೆ. ಮಾತೆಯಾದೆ. ತಂದೆಯು ಎದೆಯೊಡೆದು ಸತ್ತರು. ಊರಿಗೆಲ್ಲ ದೋಷಿಯಾಗಿ ಕಂಡೆ. ಪಡಬಾರದ ಕಷ್ಟಪಟ್ಟೆ. ಕೊನೆಗಿಲ್ಲಿ ಬಂದೆ ನಳಿನಾ ........ ನನ್ನಮ್ಮ ನೀನೂ ಆ ರೀತಿ ಬಲಿಯಾಗದಿರೆ ತಾಯಿ.....

[.... ಇಬ್ಬರೂ ಒಬ್ಬರ ಮುಖವನ್ನೊಬ್ಬರು ನೋಡುವರು... ಮೆಲ್ಲನೆ ನಳಿನಳು "ಕ್ಷಮಿಸಮ್ಮ........ತಪ್ಪಾಯ್ತು" ಎಂದು ತಲೆ ತಗ್ಗಿಸುವಳು. ತಾಯಿಯ ಮುಖದಲ್ಲಿ ಸ್ವಲ್ಪ ಮುಗುಳುನಗೆಯು ಸುಳಿದು ಮಾಯವಾಗುವುದು. ಮಗಳ ತಲೆ ನೇವರಿಸುತ್ತಿರುವಳು ಕ್ಷಣಕಾಲ ಮೌನ.]

ನಳಿನ— ........ಅಮ್ಮಾ?

ತಾಯಿ— ........ತಾಯಿ?

ನಳಿನ— ........

ತಾಯಿ— ಕೇಳು ಮಗೂ

ನಳಿನ— ....ಆ....ಆತನನ್ನಷ್ಟು ಪ್ರೀತಿಸುತ್ತಿದ್ದೆಯಾ....?

ತಾಯಿ— ಈಗೆಷ್ಟು ದ್ವೇಷಿಸುತ್ತಿರುವೆನೋ ಅಷ್ಟೇ ಆಗ ಪ್ರೀತಿಸುತ್ತಿದ್ದೆ ತಾಯಿ...

[ಮತ್ತೆ ಮೌನವಾಗುವುದು]

**ತೆರೆ.**

---

# ೫ನೆಯ ದೃಶ್ಯ



[ನಡುಮನೆಯಲ್ಲಿ, ಒಂದೆರಡು ಪೆಟ್ಟಿಗೆಗಳು ಒಂದೆಡೆ, ಎರಡು ಹಾಸಿಗೆಗಳೊಂದೆಡೆ ಒಂದರಮೇಲೊಂದು ಒಪ್ಪವಾಗಿಟ್ಟಿವೆ. ಗೋಡೆಯಮೇಲೆ ಕೆಲವು ಪಠಗಳು ಮೊಳೆಗೆ ತೂಗುಹಾಕಲ್ಪಟ್ಟಿವೆ. ಗೂಟದಮೇಲೆ ಎರಡು ಸೀರೆಗಳಿವೆ. ನೆಲದಮೇಲೆ ಕುಳಿತು, ಒಂದು ಕಬ್ಬಿಣದ ಒರಳಿನಲ್ಲಿ ಏನನ್ನೋ ಸಣ್ಣಹಾರೆಯಿಂದ ನಳಿನಳು ಕುಟ್ಟಿ ಪುಡಿಮಾಡುತ್ತಿದ್ದಾಳೆ. ಅವಳ ತಾಯಿ ವಿಮಲೆಯು ಭಯ ವಿಹ್ವಲೆಯಾಗಿ ಸರಸರನೆ ಪ್ರವೇಶಿಸಿ, ಕೈಲಿದ್ದ ಬುಟ್ಟಿಯನ್ನು ಕೆಳಗಿರಿಸಿ, ಕಿಟಕಿಯನ್ನು ಸಮೀಪಿಸಿ ಹೊರಗಿನದೇನನ್ನೋ ಈಕ್ಷಿಸುತ್ತ ನಿಲ್ಲುವಳು. ಇದನ್ನೆಲ್ಲ ಕೌತುಕದಿಂದ ಕಂಡ ನಳಿನಳು, ಕುಟ್ಟುವುದನ್ನು ನಿಲ್ಲಿಸಿ..........]

ನಳಿನ—ಏನಾಯ್ತಮ್ಮ?

ತಾಯಿ—(ಎದೆಯು ಡವಗುಟ್ಟುತ್ತಿರಲು ತನ್ನೆರಡು ಕೈಗಳಿಂದ ಎದೆಯನ್ನಾತಿಕೊಂಡು ಮೌನದಿಂದಿರುವಳು)

ನಳಿನ—(ಎದ್ದು ತಾಯ ಬಳಿ ಸಾರಿ)........ಅಮ್ಮಾ ?

ತಾಯಿ—ಮತ್ತೇನೂ ಇಲ್ಲ ಮಗೂ...........ನನ್ನ ದುರ್ದೈವವು ಬೆನ್ನುಬಿದ್ದು ಕಾಡುತ್ತಾ ನನಗೆ ಶಾಂತಿಯೇ ಇಲ್ಲದಂತೆ ಮಾಡುತ್ತಿದೆ, ಅಷ್ಟೆ...............ಎಳೆತನದ ತಿಳಿಗೇಡಿತನಕ್ಕೆ-ನನ್ನ ಪಾಪಕ್ಕೆ ನಾನಿನ್ನೂ ಪೂರ್ಣವಾಗಿ ದಂಡ ತೆತ್ತಿಲ್ಲವೆಂದು ತೋರುವುದು...........ಇನ್ನೂ ಏನೇನು ಕಷ್ಟಗಳು ನನಗಾಗಿ ಕಾದಿವೆಯೋ ಕಾಣೆ!

ನಳಿನ—ಈಗೇನಾಯ್ತು ಹೇಳಲಾರೆಯೇನಮ್ಮ?

ತಾಯಿ—ಏನುತಾನೆ ಹೇಳಲಿ ಮಗೂ?........ಆತ........ ಆತನಿನ್ನೂ ಜೀವಂತನಾಗಿದ್ದಾನೆ.

ನಳಿನ—ಯಾವಾತನಮ್ಮ?

ತಾಯಿ—(ಮನನೊಂದು)........ ಓ! ನಿನಗೆ ಹೇಗೆ ತಿಳಿಯ ಹೇಳಲಿ........ನೀನು ಪ್ರಶ್ನಿಸುತ್ತ ಹೋಗುವುದನ್ನು ನಿಲ್ಲಿಸಿದರೆ........ಆತನು............ನಿ........ ನಿನ್ನ............

ನಳಿನ—ಓ! ಕ್ಷಮಿಸಮ್ಮ, ಮರೆತಿದ್ದೆ........(ಸ್ವಲ್ಪ ಹೊತ್ತು ಸುಮ್ಮನಿದ್ದು) ಕಣ್ಣಾರೆ ಕಂಡೆಯಾ?

ತಾಯಿ—........ಇಲ್ಲ........ ಪೇಟೆಯಿಂದ ಹಿಂದಿರುಗುತ್ತಿದ್ದಾಗ ಹಿಂದಿನಿಂದ ಯಾರೋ ನನ್ನ ಹೆಸರು ಹಿಡಿದು ಮೆಲ್ಲನೆ ಕೂಗಿದಂತಾಯ್ತು .... ಬಹಳ ಹಿಂದೆ, ಆ ರೀತಿ ಆತನು ನನ್ನನ್ನು ಕರೆಯುತ್ತಿದ್ದುದು ತಟ್ಟನೆ ನೆನಪಾಗಲು ಬೆಚ್ಚಿ-ನಡುಗಿ ನಿಂತೆ, ಮತ್ತೆ ಅದೇ ಮೆಲ್ಲನೆಯ ಕೂಗು ಕೇಳಿ, ತಿರುಗಿ ನೋಡಲಂಜಿ ಸರಸರನೆ ಮನೆಗೋಡಿ ಬಂದೆ ............ ನನ್ನನ್ನಾತನು ಹಿಂಬಾಲಿಸಿ ಬರುತ್ತಲೇ ಇರುವನೆಂದು ಮನಸ್ಸಿಗೆ ಭಾಸವಾಯ್ತು.... ಆದ್ದರಿಂದ ಈಗೇನು ಮಾಡುವುದೆಂದು ದಾರಿಕಾಣದವಳಾಗಿದ್ದೇನೆ........ಅಗೋ ನೋಡು........ಅಲ್ಲಿ ನಿಂತು ಯಾರನ್ನೋ ಮಾತನಾಡಿಸುತ್ತಿರುವಾತ........ಬಹುಶಃ ನನ್ನ ಮನೆಯು ಇದೇ ಎಂದು ಖಂಡಿತಮಾಡಿಕೊಳ್ಳಲು ವಿಚಾರಿಸುತ್ತಿರುವಂತಿದೆ.............ಆತನೇ....ಸ್ವಲ್ಪವೂ ಬದಲಾವಣೆಯಿಲ್ಲ........ಅದೇ ಠೀವಿ—ಅದೇ ಬಗೆಯಲ್ಲಿ ತಲೆಯನ್ನೋರೆ ಮಾಡಿಕೊಂಡು ಮಾತನಾಡುವುದು,

ಕೈ ತಿರುಗಿಸುವುದು....ಎಲ್ಲವೂ ಹಾಗೆಯೇ ಇದೆ. ನಳಿನ
........(ತನ್ನಲ್ಲಿ)...........ಹೃದಯವೂ ಮೊದಲಿನಂತೆಯೇ
ಇರಬಹುದು........

ನಳಿನ—ಯಾರಾದರೂ ನೋಡಿದೊಡನೆ ಸದ್ಗೃಹ
ಸ್ಥನೆಂದೇ ಹೇಳುವ ಹಾಗಿರುವನಲ್ಲಮ್ಮ?............
ಜೊತೆಗೆ ರೂಪವೂ ಇದೆ........

ತಾಯಿ—ಹೌದು ಮಗೂ.... ...ಆ ಸುಂದರಾಕೃತಿಯಲ್ಲಿ
ತನ್ನನ್ನು ನಂಬಿದವರಿಗೆ ನಿಶ್ಚಿಂತೆಯಿಂದ ದ್ರೋಹ ಬಗೆ
ಯುವ ಕರುಣರಹಿತ ಹೃದಯವೂ ಇದೆ........ತಾನು
ಮಾಡಿದ ತಪ್ಪುಗಳನ್ನು ಸವಿಮಾತುಗಳಿಂದ ಮುಚ್ಚಿಕೊ
ಳ್ಳುವ ಚತುರ ನಾಲಿಗೆಯೂ ಇದೆ....(ತನಗೆ ತಾನೇ)........
ಆದರದು ಈಗ ನನ್ನನ್ನು ಮತ್ತೆ ವಂಚಿಸಲಾರದು.

ನಳಿನ—ಆತನೀಗ ಇಲ್ಲಿಗೆ ಬರುವನೇನು?

ತಾಯಿ—ಹಾಗೆಯೇ ಕಾಣುವುದು........ಇಲ್ಲದಿದ್ದರೆ ಹಿಂದೆ
ಬರುವನೇಕೆ?........ಮತ್ತೆ ಆತನ ಮುಖವನ್ನು ನೋ
ಡುವ ಇಚ್ಛೆ ನನಗಿಲ್ಲ....ಆದರೇನು ಮಾಡಲಿ?........
ನೋಡಬೇಕಾಗಿ ಬಂದಿದೆ....ವಿಧಿಯಿಲ್ಲ........

ನಳಿನ—ನೋಡಲೇಬೇಕೆಂದು ಒತ್ತಾಯ ಪಡಿಸುವರಾರು?
ಹಾಗೇನಾದರೂ ಆತನು ಕೇಳಿಕೊಂಡು ಬಂದರೆ ನೀನು
ಮನೆಯಲ್ಲಿಲ್ಲವೆಂದು ಹೇಳಿ ಬಾಗಿಲುಗಳನ್ನು ಮುಚ್ಚಿ
ಬಿಡುತ್ತೇನೆ........

ತಾಯಿ—ನೀನಿನ್ನೂ ಆತನನ್ನರಿಯೆ, ನಳಿನ........ಅದನ್ನೆಲ್ಲ
ಆತನು ನಂಬದೇ ಹೋಗಬಹುದು....ಅಲ್ಲದೆ ಆತನು

ಹೊರಗಿದ್ದಷ್ಟೂ ನಮಗೆ ಹಾನಿ ಹೆಚ್ಚು....ಅದರಬದಲು ಆತನನ್ನು ಕಂಡು ಆತನ ಮನಸ್ಸಿನಲ್ಲಿರುವುದೇನೆಂದಾದರೂ ತಿಳಿದು, ಅದನ್ನೆದುರಿಸಲು ಸಿದ್ಧಳಾಗಬಹುದು ........ಅಗೋ....ಇತ್ತ ಬಂದೇಬಂದನು ...ನಳಿನಾ.... ಇನ್ನು ನೀನಿಲ್ಲಿರಬೇಡ ತಾಯಿ....ನಿನ್ನ ಕೋಣೆಗೆಹೋಗಿ ಕದಮುಚ್ಚಿಕೊಂಡಿರು........ನಾನಾಗಿ ನಿನ್ನನ್ನು ಕೂಗುವವರೆಗೂ ಹೊರಕ್ಕೆ ಬರಬಾರದು....ತಿಳಿಯಿತೆ?

ನಳಿನ—(ತಾಯನ್ನಪ್ಪಿಕೊಂಡು)........ ನನಗೇಕೋ ಅಂಜಿಕೆಯಾಗುತ್ತಿದೆಯಮ್ಮ....ನನ್ನನ್ನಿಲ್ಲಿಯೇ ಇರಗೊಡು....

ತಾಯಿ—(ಮಗಳ ತಲೆ ನೇವರಿಸಿ) ಬೇಡಮ್ಮ........ಈ ಹೊತ್ತಿನಲ್ಲಿ ನನಗಿಷ್ಟು ನೆರವಾಗಲಾರೆಯಾ ತಾಯಿ............ ಹೋಗು........

[ಎಂದು ಮಗಳನ್ನು ಒಳಕ್ಕೆ ಕಳುಹಿ ನಿಟ್ಟುಸಿರಿಟ್ಟು, ಯೋಚನಾಮಗ್ನಳಾಗಿ ನಿಲ್ಲುವಳು. ದೃಢ ಸಂಕಲ್ಪವನ್ನು ಸೂಚಿಸುವ ನೂತನವಾದೊಂದು ಭಾವವು ಮುಖದಲ್ಲಿ ಮೂಡುವುದು. ಹಿಂದಿನ ದಿನಗಳ ನೆನಪಾಗಿ ಕಣ್ಣುಗಳು ಕ್ರಮೇಣ ಕೆಂಪೇರುವುವು. ಹುಬ್ಬು ಗಂಟಿಕ್ಕುವುದು. ಆಗ ಉತ್ತಮ ವಸ್ತ್ರಗಳನ್ನು ಧರಿಸಿರುವ, ಕಾಮುಕನಂತೆ ತೋರುವ, ಮಧ್ಯವಯಸ್ಸಿನ ಸುಂದರಪುರುಷನೊಬ್ಬನು "ವಿಮಲಾ" ಎಂದು ಕೂಗುತ್ತ ಪ್ರವೇಶಿಸುವನು. ಮನುಷ್ಯನ ಮುಖವನ್ನು ನೋಡಿದರೆ ಆತನ ಶತೃತ್ವವನ್ನು ಗಳಿಸದಿರುವುದೇ ಶ್ರೇಯಸ್ಕರವೆಂದು ಎರಡನೆಯ ನೋಟಕ್ಕೆ ಕಾಣಬರುವುದು. ಆತನು ಬಂದೊಡನೆಯೇ "ತಪ್ಪಿಸಿಕೊಳ್ಳಲು ಮಾರ್ಗ ಕಾಣದೆ ಕೇವಲ ಭೀತಿಯಿಂದ ಆತ್ಮರಕ್ಷಣೆಗಾಗಿ, ಹಿಂದಟ್ಟಿ ಬರುವ ಹುಲಿಯನ್ನು ಪ್ರತಿಭಟಿಸಿ ನಿಲ್ಲುವ ಹಸುವಿನಂತೆ" ವಿಮಲೆಯು ತಟ್ಟನೆ ತಿರುಗಿ ಬಂದಾತನನ್ನು ದುರದುರನೆ ನೋಡುವಳು. ಆ ದೃಷ್ಟಿಯು ಸಲಿಗೆಯಿಂದ ಬಳಿ ಬರುವ ಆತನ

ನಡೆಯನ್ನು ತಡೆಗಟ್ಟಿ ಸ್ವಲ್ಪ ದೂರದಲ್ಲಿಯೇ ನಿಲ್ಲಿಸಲು, ಆತನ ಮುಖವು ಕಳೆಗೆಡುವುದು ಕ್ಷಣಕಾಲ ಎಲ್ಲವೂ ಮೌನ.. ]

ಆತ—ವಿಮಲಾ........?

ವಿಮಲ— .......(ಕೋಪೋದ್ರೇಕದಿಂದ ಮುಖವು ಕೆಂಪೇರಿ ತುಟಿಗಳು ಕಂಪಿಸುತ್ತಿರಲು ಮುನ್ನಿನಂತೆಯೇ ನೋಡುತ್ತಿರುವಳು.)

ಆತ—(ಕೃತಕ ನಗೆ ಬೀರುತ್ತ) ........ ಮಾತನಾಡಲಿಷ್ಟವಿಲ್ಲವೇನು ವಿಮಲಾ?........ನಿನ್ನ ಗೂಡಿನ ಪತ್ತೆಹಚ್ಚಿದೆನೆಂದು ಕೋಪವೆ?

ವಿಮಲ—ಚೇತರಿಸಿಕೊಳ್ಳಲಾಗದಷ್ಟು ದ್ರೋಹ ಬಗೆದು ತಲೆಮರೆಸಿಕೊಂಡು, ಈಗ ಮತ್ತೆ ನಾಚಿಕೆಯಿಲ್ಲದೆ ಬಂದೆದುರಿಗೆ ನಿಲ್ಲುವ ನಿಮ್ಮ ನೀಚಸಾಹಸವನ್ನು ಮೆಚ್ಚದೆ ಕೋಪಿಸಿಕೊಂಡರಾದೀತೆ?

ಆತ—........ಬಹಳ........ಬದಲಾಗಿ ಹೋಗಿರುವೆ........

ವಿಮಲ—ನಿಮ್ಮಲ್ಲೇನೂ ಮಾರ್ಪಾಟಾಗಿದ್ದಂತಿಲ್ಲ......... ಬಹುಶಃ ನಿಮ್ಮ ದುರ್ಗುಣಗಳಿನ್ನೂ—

ಆತ—(ಹುಬ್ಬು ಗಂಟಿಕ್ಕಿ).. ...ವಿಮಲಾ?

ವಿಮಲ—ಒಮ್ಮನಸ್ಸಿನಿಂದ ಪರರಿಗುಪಕಾರ ಮಾಡುತ್ತಿರುವವರನ್ನು ಬಹು ಬೇಗ ಮೃತ್ಯುವು ಎಳೆದೊಯ್ಯುತ್ತ.... ಮೃದು ವಚನಗಳಿಂದ ಮುಗ್ಧ ಬಾಲಕಿಯರನ್ನು ಮೋಸಗೊಳಿಸಿ, ಅವರು ತಮ್ಮ ಬಲೆಗೆ ಬಿದ್ದನಂತರ ಅವರ ಜೀವನವನ್ನೇ ಮಣ್ಣುಗೂಡಿಸಿ ಓಡುವ ನಿಮ್ಮಂತಹ ವಿಷಸರ್ಪಗಳನ್ನೇಕೆ ಮೃತ್ಯುವು ಮರೆಯುವುದೋ ಕಾಣೆ...........

ಆತ—ಸತ್ತವರು ಬದುಕಿ ಬಂದಂತೆ ಇಷ್ಟು ವರ್ಷಗಳ ಮೇಲೆ ಅಕಸ್ಮಾತ್ತಾಗಿ ಮನೆಗೆ ಬಂದರೆ ನೀನೀರೀತಿ ವರ್ತಿಸುವೆಯೆಂದು ನಾನು ಭಾವಿಸಿರಲಿಲ್ಲ.

ವಿಮಲ—(ಕೆರಳಿದ ಸರ್ಪದಂತೆ)........ಮತ್ತಿನ್ನೇನು?......ನನ್ನ ಜೀವನವನ್ನು ಕಲುಷಿತವನ್ನಾಗಿ ಮಾಡಿ, ನನ್ನ ತಂದೆಯನ್ನು ಕೊಂದ, ನನ್ನ ಭಾಗದ ದುರ್ದೈವವು ಬಂದಿತೆಂದು ಆನಂದದಿಂದೋಡಿ ಬಂದಪ್ಪಿಕೊಳ್ಳುವೆನೆಂದು ಬಗೆದಿದ್ದಿರಾ?...........

ಆತ—(ಮಾತನಾಡಲರಿಯದೆ ಮೌನದಿಂದಿರುವನು.)

ವಿಮಲ—......ತಂದೆಯು, ನಿಮ್ಮ ನೀಚಗುಣಗಳನ್ನರಿತು ನಿಮ್ಮನ್ನು ಮನೆಯಿಂದ ಹೊರಗೆ ಹಾಕಿದರೆಂದುದನ್ನು ನಂಬದೆ,.....ನಿಮ್ಮಲ್ಲಿ ಪೂರ್ಣ ವಿಶ್ವಾಸವಿಟ್ಟು, ನೀವು ಹೇಳಿದುದನ್ನೆಲ್ಲ ನಂಬಿ, ಹಸಿದು ಬಂದಾಗ ತಂದೆಗೆ ಕಾಣದಂತೆ ಅನ್ನವಿಟ್ಟು, ಹಣ ಬೇಡಿದಾಗ ಹಣ ತೆತ್ತು, ಕೊನೆಗೆ ನಿಮ್ಮ ಮೋಸದ ಮಾತುಗಳಿಗೆ ಮರುಳಾಗಿ ನನ್ನ ಸರ್ವಸ್ವವನ್ನೂ ಅರ್ಪಿಸಿದುದಕ್ಕೆ......

ಆತ—ಹೆಂಗಸರು ತಾವು ಎಡಹುವ ಮುಂಚೆಯೇ ಇದನ್ನೆಲ್ಲ ಏಕೆ ಯೋಚಿಸಬಾರದು? ಗಂಡಸರನ್ನೇ ನಿಮ್ಮಿಂದ ದೂರವಾಗಿಟ್ಟರೆ ನಿಮಗೆ ಕಷ್ಟವೇನು? ಅವರು ತಮ್ಮ ಕಾರ್ಯಸಾಧನೆಗೆ ಸಾವಿರ ಮಾತು ಹೇಳಬಹುದು; ಹಾಗೆ ಹೇಳಿದುದನ್ನೆಲ್ಲ ನಂಬಬೇಕೆಂದು ನಿಮ್ಮನ್ಯಾರು ಒತ್ತಾಯಪಡಿಸುವರು? ನಿನಗಾ ಎಚ್ಚರಿಕೆ ಮೊದಲೇ ಇರದೆ

ಈಗ ನನ್ನನ್ನು ದೂರಿದರೆ ಲಾಭವೇನು? ನನಗಿಂತಲೂ ಹೆಚ್ಚಾಗಿ ಎಷ್ಟೋ ಜನರು..........

ವಿಮಲ—(ಉಕ್ಕಿ ಬರುವ ದುಃಖವನ್ನು ಶ್ರಮಪಟ್ಟು ತಡೆಯುತ್ತ) .....ಇತರರ ಮಾತು ನನಗೆ ಬೇಡ.....ನಿಮ್ಮನ್ನು ಅನಾಥ ಹುಡುಗನೆಂದು ತಂದೆಯವರು ಸಾಕಿ ಬೆಳಸಿದರು. ಕೊನೆಗೆ ತಮ್ಮ ಮಗಳನ್ನೇ ಕೊಟ್ಟು ಮದುವೆಮಾಡಿ, ತಮ್ಮ ವೃದ್ಧಾಪ್ಯದ ಆಧಾರವಾಗಿ ಮನೆಯಲ್ಲಿಯೇ ಮಗಳೂ ಅಳಿಯನೂ ಇರುವರೆಂದಾಸೆ ಇಟ್ಟುಕೊಂಡಿದ್ದರು. ಅದರಂತೆಯೇ ನಾನೂ, ನನ್ನ ಭಾವೀಪತಿಯೆಂದು ಹಿಗ್ಗಿ ನಲಿಯುತ್ತಿದ್ದೆ,.....ಇವೆಲ್ಲಕ್ಕೂ ನಿಮ್ಮ ಕೃತಜ್ಞತೆಯನ್ನು ಎಂತಹ ನೀಚರೀತಿಯಲ್ಲಿ ವ್ಯಕ್ತಪಡಿಸಿದಿರಿ?....ನಿಮ್ಮ ಬಲೆಗೆ ಬಿದ್ದ ಮುಗ್ಧೆಯ ಮುಂದಿನ ಗತಿಯನ್ನು ಕುರಿತು ಯೋಚಿಸುವಷ್ಟು ಕರುಣವಿಲ್ಲದೆ ಹೋಯಿತೆ, ನಿಮ್ಮ ಹಾಳು ಹೃದಯದಲ್ಲಿ?

ಆತ—( ತಲೆ ತಗ್ಗಿಸಿಕೊಂಡು ಅಸಡ್ಡೆಯಿಂದ )...........ಏನೋ ಆದುದು ಆಗಿಹೋಯ್ತು........ಈಗದನ್ನು ಕಟ್ಟಿಕೊಂಡೇನು ವಿಮಲಾ?

ವಿಮಲ—ಅಷ್ಟೆ! ಹಾಗೆನ್ನುವುದು ಅತಿ ಸುಲಭ. ನೀವೂ ಹೆಂಗಸಾಗಿ ಹುಟ್ಟಿ ಆ ಕಷ್ಟಗಳನ್ನನುಭವಿಸಿದ್ದರೆ ತಿಳಿಯುತ್ತಿದ್ದಿರಿ........

ಆತ—ಇಲ್ಲ ವಿಮಲಾ! ನಡೆದುದನ್ನು ಹೇಳುತ್ತೇನೆ ಕೇಳು. ಇಷ್ಟವಿದ್ದರೆ ನಂಬು, ಕಷ್ಟವಾದರೆ ಬಿಡು....ಆಗ ಕೆಲವು ಗುರುತರಕಾರಣಗಳಿಂದ ನಿಮ್ಮೂರನ್ನು ಬಿಟ್ಟು ಬೇರೊಂ

ದೂರಿಗೆ ಹೋಗಬೇಕಾಯ್ತು........................ ಅಲ್ಲಿಗೆ ಹೋದಮೇಲೆ ಅಲ್ಲಿ ಮತ್ತಷ್ಟು ಕಷ್ಟಗಳಿಗೆ ಸಿಕ್ಕಿದೆ. ಅವುಗಳ ಮಧ್ಯೆ ನಿನ್ನ ಯೋಚನೆಯೇ ಮರೆತುಹೋಯಿತು..... ಇಲ್ಲದಿದ್ದರೆ ಹಿಂದಿರುಗಿ ನಿನ್ನ ಬಳಿಗೆ ಬಾರದೆ ಇರುತ್ತಿದ್ದೆನೆ?......... ಹಾಗೂ ಒಂದು ಸಲ ನಿಮ್ಮೂರಿಗೆ ಬಂದೆ. ಆಗ ನೀವಲ್ಲಿರಲಿಲ್ಲ ....ನನ್ನ ಪರಿಚಯವಿಲ್ಲದವರು ಕೆಲವರಿಂದ ನಡೆದ ವಿದ್ಯಮಾನಗಳನ್ನರಿತೆ........ ನಿಜವಾಗಿಯೂ ನನಗೆ ಬಹು ವ್ಯಥೆಯಾಯ್ತು ವಿಮಲಾ!

ವಿಮಲ—(ವ್ಯಂಗ್ಯವಾಗಿ) ಅಯ್ಯೋ ಪಾಪ! ಆಗದೆ ಇದ್ದೀತೆ?

ಆತ—ಹಾಗೆಂದರೆ ನಾನೇನು ಮಾಡಲಿ.....ನಿನಗಾಗಿ ಏನು ಬೇಕಾದರೂ ಮಾಡಲು ಈಗಲೂ ಸಿದ್ಧವಾಗಿದ್ದೇನೆ.....

ವಿಮಲ—ತಂದೆಯುವರು ಹೇಗೂ ಈಗ ಜೀವಂತರಾಗಿಲ್ಲದ ಮೇಲೆ ಹಣ - ಕಾಸೆಲ್ಲವೂ ನನ್ನ ಬಳಿ ಇರುವುದೆಂದು ತಿಳಿದಿರುವಾಗ, ಸಿದ್ಧವಾಗಿರುವುದಕ್ಕೇನು ನಷ್ಟ?

ಆತ—(ಮತ್ತೆ ಕೃತಕನಗೆ ಬೀರಿ, ತನ್ನ ಮನೋಭಾವವನ್ನು ಮುಚ್ಚಿಕೊಳ್ಳಲೆತ್ನಿಸುತ್ತ)...... ಈಗ ನಿನಗೆ ಬಹಳ ಕೋಪವಿದೆ, ..........ವಿಮಲಾ...........ಹಿಂದಿನಿಂದ ಶಾಂತವಾಗಿ ಎಲ್ಲವನ್ನೂ ಮಾತನಾಡಿ, ಏನು ಮಾಡುವುದೆಂದು ನಿರ್ಧರಿಸೋಣ (ಎಂದು ತನ್ನ ಅಂಗಿ- ಟೋಪಿಗಳನ್ನು ತೆಗೆದು ಅವನ್ನು ತೂಗುಹಾಕಲು ಸರಿಯಾದ ಜಾಗವನ್ನು ಕಂಡುಹಿಡಿಯಲು ಅತ್ತಿತ್ತ ನೋಡುತ್ತಿರುವನು.)

ವಿಮಲ—(ಅದನ್ನು ಗಮನಿಸಿ)....... ನೀವಿಲ್ಲಿರಲು ಸಾಧ್ಯವಿಲ್ಲ ................ಆ ಯೋಚನೆಯೇನಾದರೂ ಇಟ್ಟುಕೊಂಡಿದ್ದಲ್ಲಿ ಅದನ್ನು ಮರೆತುಬಿಡಿ...........

ಆತ—(ಈ ಮಾತುಗಳನ್ನು ಕೇಳಿಯೂ ಕೇಳದವನಂತೆ ಅತ್ತಿತ್ತ ನೋಡಿ ಕೊನೆಗೆ ಗೋಡೆಯಲ್ಲಿನ ಮೊಳೆಯೊಂದಕ್ಕೆ ತನ್ನ ಅಂಗಿ ಟೋಪಿಗಳನ್ನು ತೂಗುಹಾಕುವನು)

ವಿಮಲ—(ವ್ಯಗ್ರಳಾಗಿ) ಹೇಳಿದುದು ಕೇಳಿಸಿತೆ?........ನೀವು ...........ಇಲ್ಲಿ..........ಇರಲು..........ಸಾಧ್ಯವಿಲ್ಲ.

ಆತ—(ಅದಕ್ಕೆ ಕಿವಿಗೊಡದೆ ನಸುನಗುತ್ತ).. ನಾನಿಲ್ಲಿಗೆ ಬರುವ ಮುಂಚೆ, ನಿನಗೊಬ್ಬ ಮಗಳಿರುವಳೆಂದು ಯಾರೋ ಹೇಳಿದರು..........ಅವಳ ವಿಚಾರವನ್ನೇ ನೀನಿನ್ನೂ ನನಗೆ ಹೇಳಿಲ್ಲ..........ವಿಮಲಾ! ..............ಈಗೆಷ್ಟು ವಯಸ್ಸು ಅವಳಿಗೆ?

ವಿಮಲ—ಹದಿನೈದು...........

ಆತ—ಹದಿನೈದು ವರ್ಷಗಳು..........ನಾನಿನ್ನೂ ನೋಡಿಯೇ ಇಲ್ಲ................ಯಾರನ್ನು ಹೋಲುತ್ತಿದ್ದಾಳೆ ವಿಮಲಾ? ನನ್ನನ್ನೇ.....?

ವಿಮಲ—ನಿಮ್ಮನ್ನು ಹೋಲುತ್ತಿದ್ದಿದ್ದರೆ ಕೂಡಲೆ ಕುತ್ತಿಗೆ ಹಿಂಡಿ ಕೊಲ್ಲುತ್ತಿದ್ದೆ.

ಆತ—ಹಾಗೆ ಮಾಡದೆ, ಅವಳಿನ್ನೂ ಬದುಕಿರುವುದರಿಂದ ಅವಳಮೇಲೆ ನಿನಗೆ ಅಲ್ಪ-ಸ್ವಲ್ಪ ಪ್ರೀತಿಯೂ ಇದೆ ಯೆಂದಾಯ್ತು? ನಿಜವಾಗಿಯೂ ಅವಳನ್ನೆಷ್ಟು ಪ್ರೀತಿ ಸುವೆಯಾ?

ವಿಮಲ—ನಿಮ್ಮನ್ನೆಷ್ಟು ದ್ವೇಷಿಸುತ್ತಿರುವೆನೋ ಅಷ್ಟು ಅವಳನ್ನು ಪ್ರೀತಿಸುವೆನು. ನನ್ನೊಬ್ಬಳದೇ ಅಲ್ಲ, ಅವಳ ತಲೆಯಮೇಲೆ ಬಂಡೆ ಎಳೆದಿರುವ ಸೌಭಾಗ್ಯವೂ ನಿಮ್ಮ

ಪಾಲಿಗಿದೆ. ಅವಳಿಗೆ ತಂದೆಯೆಂದು ಹೇಳಿಕೊಳ್ಳಲು ಒಂದು ಹೆಸರಿಲ್ಲದಂತೆ ಮಾಡಿರುವಿರಿ......

ಆತ—(ಬೇಸರದಿಂದ) ಓ! ಸಾಕುಮಾಡು ವಿಮಲಾ!.....ಅದನ್ನೆಲ್ಲ ಸರಿಪಡಿಸಿಕೊಳ್ಳಬಹುದು..........ಸುಮ್ಮನೆ ಇಲ್ಲದುದನ್ನು ಏಕೆ ಹಚ್ಚಿಕೊಂಡು ಕೊರಗುವೆ?

ವಿಮಲ—ಹೇಗೆ ಸರಿಪಡಿಸುವಿರಿ?

ಆತ—ಇಲ್ಲಿ ನೋಡು ವಿಮಲಾ!.....ಈ ಊರಿನಲ್ಲಿ ನಿನ್ನನ್ನು ಕಂಡವರಿರಬಹುದು.....ಈ ಊರನ್ನು ಬಿಟ್ಟು ದೂರದ ದೇಶಕ್ಕೆ ಹೋಗಿ ನಾವು ಗಂಡ – ಹೆಂಡತಿ – ಮಗಳಂತೆ ಇದ್ದರೆ ಈ ತಾಪತ್ರಯಗಳೆಲ್ಲ ಸುಲಭವಾಗಿ ಕೊನೆಗಾಣುವುದಿಲ್ಲವೆ ?

ವಿಮಲ—ನೀವೆಷ್ಟು ಹೇಳಿದರೂ, ಲೇಶಮಾತ್ರವೂ ನಿಮ್ಮಲ್ಲಿ ನನಗೆ ನಂಬಿಕೆ ಹುಟ್ಟದು......

ಆತ—ಹಾಗಿದ್ದಮೇಲೆ ನನ್ನನ್ನಿನ್ನು ವೃಥಾ ದೂರಬೇಡ......ಇವೆಲ್ಲದರಿಂದ ಪಾರಾಗಲು ಒಂದು ದಾರಿಯುಂಟೆಂದು ತೋರಿಸಿದೆ......ನಿನಗೀಗ ಮನಸ್ಸು ಸಮಾಧಾನಸ್ಥಿತಿಯಲ್ಲಿಲ್ಲ......ಸ್ವಲ್ಪ ಹೊತ್ತು ಯೋಚಿಸಿ ನೋಡು......ಏನೂ ನಷ್ಟವಿಲ್ಲ.....ಈ ಮಧ್ಯೆ ನನಗೆ ಸ್ವಲ್ಪ ಹಸಿವಾಗುತ್ತಿದೆ... ಮೊದಲು ಊಟಮಾಡಿಬಿಡೋಣ ನಡಿ...........ಆಮೇಲೆ ಎಲ್ಲವನ್ನೂ ಯೋಚಿಸಿ ಇತ್ಯರ್ಥಮಾಡೋಣ.

ವಿಮಲ—( ನಿಂತ ಜಾಗದಿಂದ ಕದಲದೆ, ಗಂಭೀರ ಧ್ವನಿಯಲ್ಲಿ ನಿಮ್ಮನ್ನೀ ಮನೆಯಲ್ಲಿ ಇನ್ನು ಒಂದುಕ್ಷಣವೂ ಇರಗೊಡುವುದಿಲ್ಲ. ನಾನಾಗಲೆ ಹೇಳಿದುದು ನಿಮಗರ್ಥವಾಗ

ಲಿಲ್ಲವೇನೋ; ದಯವಿಟ್ಟು ಇಲ್ಲಿಂದ ಹೊರಡಿ...........ಕಷ್ಟವೋ ಸುಖವೋ ಅದನ್ನು ನಾವು ಹೇಗಾದರೂ ಅನುಭವಿಸಿಕೊಂಡಿರುತ್ತೇವೆ.

ಆತ—(ಅಸಮಾಧಾನದಿಂದ) ....... ನೀನೇನು ಜಗಳಕ್ಕೇ ಸಿದ್ಧವಾಗಿ ನಿಂತಿರುವ ಹಾಗಿದೆ..........ವಿಮಲ?

ವಿಮಲ—ನನ್ನ ಎಚ್ಚರಿಕೆಯಲ್ಲಿ ನಾನಿದ್ದೇನೆ. ನನಗೊಬ್ಬ ಮಗಳಿದ್ದಾಳೆ. ಅವಳನ್ನು ಕಾಪಾಡುವ ಭಾರ ನನ್ನದು. ಅವಳ ಸೌಖ್ಯಕ್ಕಾಗಿ ನಿಮ್ಮನ್ನು ಈ ಮನೆಯಿಂದ ಆದಷ್ಟೂ ದೂರವಾಗಿಡಬೇಕಾಗಿದೆ.....ಹೊರಡಿ.....

ಆತ—ಸರಿ ಹಾಗಾದರೆ ನೀನೂ ಖಂಡಿತವಾಗಿ ಮಾತನಾಡಿದಮೇಲೆ ನಾನೂ ಹಾಗೆಯೇ ಮಾಡಬೇಕಾಗುವುದು; ವಿಧಿಯಿಲ್ಲ. ನನಗೂ ಅಲೆದಲೆದು ಬೇಸರವಾಗಿದ್ದಿತು.... ಇಲ್ಲಿ ಕೆಲವುಕಾಲ ವಿಶ್ರಾಂತಿ ತೆಗೆದುಕೊಳ್ಳೋಣವೆಂದು ಬಂದೆ..........ನೀನು ಅದಕ್ಕವಕಾಶಕೊಡದೆ ಓಡಿಸುವಾಗ ನಾನೇಕೆ ನಿನ್ನನ್ನು ಸುಮ್ಮನೆ ಬಿಡಲಿ?

ವಿಮಲ—(ವ್ಯಂಗ್ಯನಗೆ ನಕ್ಕು)......... ಇದು ಹೀಗೆ ಬರುವುದೆಂದೇ ನಾನು ಮೊದಲು ಭಾವಿಸಿದೆ..........ಈಗ ನಿಮ್ಮ ನಿಜಗುಣವು ಹೊರಗೆ ಬರುತ್ತಿದೆ..........ಅದೇನು ಹೇಳಿಬಿಡಿ................

ಆತ—(ಕೋಪಗೊಂಡು)........ಸಾಕು ನಾಲಿಗೆಯನ್ನು ಸ್ವಲ್ಪ ಹಿಡಿತದಲ್ಲಿಟ್ಟುಕೊ..........ಇಷ್ಟುಹೊತ್ತೂ ನಿನ್ನ ಪುರಾಣ ಕೇಳಿ ನನಗೆ ಬೇಸರಹತ್ತಿ ಹೋಗಿದೆ...............ಆದಷ್ಟೂ

ಕೋಪವನ್ನು ತಡೆದಿದ್ದೆ..........ಇನ್ನು ಮತ್ತಷ್ಟು ರೇಗಿಸ ಬೇಡ...........

ವಿಮಲ—ನೀವು ರೇಗಬೇಕಾದ ಆವಶ್ಯಕವಿಲ್ಲ.....ಇಲ್ಲಿಂದ ದಯವಿಟ್ಟು ಹೊರಟುಹೋದರೆ ಸಾಕು ................

ಆತ—ನನಗೆ ಬೇಕಾದಷ್ಟು ಹಣ ಕೊಟ್ಟರೆ ನಾನಿಲ್ಲಿಂದ ಹೊರಡುವುದು ಸಾಧ್ಯ.

ವಿಮಲ—ನನ್ನಲ್ಲಿ ಹಣವಿಲ್ಲ.

ಆತ—ಹಣವಿಲ್ಲದ ಮೇಲೆ ನಾನಿಲ್ಲಿಂದ ಹೋಗುವುದಿಲ್ಲ.

ವಿಮಲ—ನನ್ನಲ್ಲಿದ್ದ ಹಣವೆಲ್ಲ ಇಲ್ಲಿಯವರೆಗೆ ನಮ್ಮ ಜೀವ ನದ ಖರ್ಚಿಗಾಗಿಹೋಯ್ತು.

ಆತ—ಹಣವಿಲ್ಲದಿದ್ದರೆ ಒಡವೆಗಳಿವೆಯಲ್ಲ; ಅವೇಸಾಕು.....

ವಿಮಲ—ನಳಿನಳಿಗೆ ಮುಂದೆ ಗತಿ?

ಆತ—ನನ್ನ ಯೋಚನೆ ನನಗೆ. ಅವರಿವರ ಗತಿಕಟ್ಟಿಕೊಂಡು ನನಗೇನಾಗಬೇಕು. ಕೊಡುವೆಯೋ ಇಲ್ಲವೊ?

ವಿಮಲ—............ ಇಲ್ಲ

ಆತ—ಇದು ಖಂಡಿತವೊ ವಿಮಲಾ?

ವಿಮಲ—......... ಹೌದು.

ಆತ—(**ಹೋಗಿ ತನ್ನ ಅಂಗಿ—ಟೋಪಿಗಳನ್ನು ಧರಿಸಿ, ಹೊರಡಲು ದ್ಯುಕ್ತನಾಗಿ**) .......... ನೀನು ಕೊಡದಿದ್ದರೂ ನಾನು ಈ ಊರನ್ನೇ ಬಿಟ್ಟುಹೋಗುವೆನು ವಿಮಲಾ...........ಆದರೆ ಹೋಗುವಮುಂಚೆ ನೀನೂ - ನಿನ್ನ ಮಗಳೂ ಈ ಊರಿ ನಲ್ಲಿ ಮತ್ತೆ ತಲೆಯೆತ್ತಿ ತಿರುಗಲಾಗದಂತೆ ಮಾಡಿ

ಹೋಗುವೆನು............ನೆನಪಿರಲಿ ............ನಿನಗೊಮ್ಮೆ ಅಂತಹ ನರಕದ ಅನುಭವವಾಗಿದೆ.

ವಿಮಲ—(ಅಧೀರಳಾಗಿ)....... ನಿಮಗಿಂತಲೂ ಇನ್ನು ನೀಚ ಪಶುಗಳಿನ್ನಿಲ್ಲ..........

ಆತ—ಆದನ್ನರಿತೂ ಹಠಹಿಡಿಯುವ ನಿನ್ನಂತಹ ಮೂಢರೂ ಇಲ್ಲ.....

ವಿಮಲ—(ದುಃಖ ಉಕ್ಕಿಬರಲು ಮೌನದಿಂದಿರುವಳು)

ಆತ—ಸರಿ..........ಹಾಗಾದರೆ ಅನುಭವಿಸು.......... (ಎಂದು ಹೋಗುತ್ತಿರುವನು. ವಿಮಲೆಯು ಭೀತಳಾಗಿ ಕಣ್ಣೀರ್ಗರೆಯುತ್ತ ಓಡಿ, ಆತನನ್ನು ತಡೆದು ತನ್ನ ಕೊರಳಿನಲ್ಲಿದ್ದ ಚಿನ್ನದಸರವನ್ನು ತೆಗೆದು)

ವಿಮಲ—ಹಿಡಿಯಿರಿ ನಿಮ್ಮ ಋಣ. (ಎಂದು ಆತನ ಕೈಲಿಡುವಳು)

ಆತ—(ಸರವನ್ನೊಮ್ಮೆ ಕೈಲಿ ತೂಗಿನೋಡಿ) ಉಹು! ಇದು ಬಹಳ ಸ್ವಲ್ಪ..........(ಎನ್ನುವನು. ವಿಮಲೆಯು ತನ್ನ ಕೈಗಳಲ್ಲಿನ ಚಿನ್ನದ ಬಳೆಗಳನ್ನೂ ತೆಗೆದುಕೊಡುವಳು)

ಆತ—(ಅಲ್ಲಿಗೂ ಅತೃಪ್ತನಾಗಿ) .......ಸಾಲದು; ಇದರಿಂದೇನು ಹಣ ಬಂದೀತು? ನನ್ನ ಒಂದು ತಿಂಗಳ ಖರ್ಚಿಗೆ ಸಾಲದು............

ವಿಮಲ—ನನ್ನದಾಗಿ ಉಳಿದಿರುವುವು ಇವು..........ವಂಚನೆಯಿಲ್ಲದೆ ಕೊಟ್ಟಿದ್ದೇನೆ.....

ಆತ—(ಸುತ್ತ ತಿರುಗಿನೋಡಿ ಪೆಟ್ಟಿಗೆಯ ಕಡೆ ಕೈ ತೋರಿ) ಸುಳ್ಳೇಕೆ ಆಡುವೆ...................... ಆ ಪೆಟ್ಟಿಗೆಯಲ್ಲೇನಿದೆ, ನೋಡೋಣ ತೋರಿಸು...........

ವಿಮಲ—(ಅಂಜಿ ಎರಡು ಹೆಜ್ಜೆ ಹಿಂದಕ್ಕೆ ಸರಿದು)...... ಅದರಲ್ಲೇನೂ ಇಲ್ಲ..........(ಎಂದು ತನ್ನ ನಡುವಿನಲ್ಲಿ ಸಿಕ್ಕಿಸಿಕೊಂಡಿದ್ದ ಬೀಗದಕೈ ಗೊಂಚಲನ್ನು ಕೈಲಿಹಿಡಿದು ಭದ್ರಪಡಿಸಿಕೊಳ್ಳುವಳು)

ಆತ—ಏನೂ ಇಲ್ಲದಮೇಲೆ ತೋರಿಸಲು ಅಂಜಿಕೆ ಏಕೆ?...... ಬೀಗ ತೆಗೆ..........

ವಿಮಲ—.....ಇಲ್ಲ.........ತೆಗೆಯಲಾರೆ...............

ಆತ—ನಿನ್ನಿಂದಾಗದ ಮೇಲೆ ನಾನೇ ತೆಗೆಯಬೇಕಾಗುವುದು.....ನೀನು ಹಿಂದೆಗೆಯುತ್ತಿರುವುದನ್ನು ನೋಡಿದರೆ ಅದರಲ್ಲಿ ಹಣವನ್ನೂ ಮುಚ್ಚಿಟ್ಟುಕೊಂಡು ನನಗೆ ಇಲ್ಲವೆಂದು ಸುಳ್ಳು ಹೇಳಿದೆಯೆಂದು ತೋರುವುದು.......... ಆದ್ದರಿಂದ ಅದರಲ್ಲಿರುವುದನ್ನೂ ತೆಗೆದುಕೊಂಡೇ ಹೋದರೆ ಆಗ ನಿನಗೆ ತಕ್ಕ ಬುದ್ಧಿ ಕಲಿಸಿದಂತಾಗುವುದು (ಎಂದು ಬೀಗದಕೈಗೊಂಚಲನ್ನು ಕಿತ್ತುಕೊಳ್ಳಲು ಹೋಗಲು ಅವಳು ತಪ್ಪಿಸಿಕೊಂಡೋಡಿಹೋಗಲು ಪ್ರಯತ್ನಿಸುವಳು. ಆತನು ಹಾರಿ, ಅಡ್ಡನಿಂತು ಅವಳನ್ನು ಹಿಡಿದು, ಅವಳ ಬಿಗಿಹಿಡಿದ ಮುಷ್ಟಿಯಿಂದ ಕೈಗೊಂಚಲನ್ನು ಬಿಡಿಸಿಕೊಳ್ಳಲೆತ್ನಿಸುತ್ತ)

ಆತ—ತಂಟೆಮಾಡದೆ ಕೊಟ್ಟುಬಿಡು ವಿಮಲಾ.....ನನ್ನನ್ನು ವೃಥಾ ಕೆಣಕಬೇಡ...............

ವಿಮಲ—(ಶಕ್ತಿಮೀರಿ ಹೆಣಗುತ್ತ).... ಜೀವವಿರುವವರೆಗೂ ಕೊಡುವುದಿಲ್ಲ. ...............

ಆತ—ಹಾಗಾದರೆ ಅನುಭವಿಸು..........( ಎಂದು ವಿಮಲೆಯ ಕಪಾಳದಮೇಲೆ ಫಟೀರನೆ ಒಂದು ಬಲವಾದ ಪೆಟ್ಟುಹಾಕಿ,

ಕೈಗೊಂಚಲನ್ನು ಕಿತ್ತುಕೊಳ್ಳುವನು. ವಿಮಲೆಯು ರೋದಿಸುತ್ತ ಕುಸಿದು ಬಿದ್ದು, ಅವನ ಕೈಕಾಲುಗಳನ್ನು ಹಿಡಿದು ಮುಂದಕ್ಕೆ ಹೋಗಲು ಬಿಡದೆ)

ವಿಮಲ—ನಿಮ್ಮ ದಮ್ಮಯ್ಯ............... ಅದರಲ್ಲಿರುವುದನ್ನು ಮುಟ್ಟಬೇಡಿ......ಅವು ನಳಿನಿಗೆಂದು ತೆಗೆದಿಟ್ಟುದು........... ನನ್ನ ಸರ್ವಸ್ವವನ್ನೆಲ್ಲ ನಿಮಗೆ ಧಾರೆಯೆರೆದೆ............ನನ್ನ ಜೀವನವನ್ನು ಕಸಕ್ಕಿಂತಲೂ ಕಡೆಯಾಗಿ ಮಾಡಿದಿರಿ...... ಆ ಒಡವೆಗಳಿದ್ದರೆ ಮುಂದೆ ನಳಿನಳಿಗೆ ಜೀವನದಲ್ಲಿ ಒಂದು ಆಧಾರ......ಅದನ್ನು ತೆಗೆದುಕೊಳ್ಳಬೇಡಿ............ ಅವಳ ಮೇಲಾದರೂ ಕನಿಕರವಿಡಿ.......... ನಿಮ್ಮ ಕಾಲಿಗೆ ಬಿದ್ದು ಕೇಳಿಕೊಳ್ಳುತ್ತೇನೆ.................( ಎಂದು ಬಿಕ್ಕಿಬಿಕ್ಕಿ ಅಳುತ್ತ ಯಾಚಿಸುವಳು)

[ಆತನು ಮಾತನಾಡದೆ ಮುಂದೆ ಹೋಗಲೆತ್ನಿಸುವನು. ಆಗದಿರಲು ರೇಗಿ, ಬಲವನ್ನೆಲ್ಲ ಬಿಟ್ಟು ವಿಮಲೆಯ ಎದೆಗೆ ಕಾಲಿನಿಂದೊದೆಯಲು, ಆ ರಭಸಕ್ಕೆ ನಿಸ್ಸಹಾಯಕಳಾಗಿ ಹಿಂದಿದ್ದ ಕಬ್ಬಿಣದ ಒರಳಿನ ಮೇಲೆ ಬಿದ್ದು ನೋವಿನಿಂದ ಚೀರುವಳು. ಆತನದನ್ನು ನೋಡಿ ಒಂದು ವಿಕಟನಗೆ ನಕ್ಕು, ಪೆಟ್ಟಿಗೆಯ ಮುಂದೆ ಹೋಗಿ ಕುಳಿತು ಬೀಗತೆಗೆದು, ಅದರಲ್ಲಿದ್ದ ಒಡವೆಗಳನ್ನು ಒಂದೊಂದಾಗಿ ನೋಡಿ ತೆಗೆದಿರಿಸುತ್ತಿರಲು, ದುಃಖದಿಂದ ಉನ್ಮತ್ತಳಾದ ವಿಮಲೆಯು ತಟ್ಟನೆ ಹಿಂದಿನಿಂದ, ಒರಳಿನ ಸಣ್ಣಹಾರೆಯನ್ನು ಹಿಡಿದೆತ್ತಿ ಆತನ ಕುತ್ತಿಗೆಯಮೇಲೆ ಬಲವಾಗಿ ಇಳಿಸುವಳು. ಕ್ಷಣಕಾಲ ನಿಶ್ಶಬ್ದ. ಆತನು ಸದ್ದಿಲ್ಲದೆ ನೆಲಕ್ಕೊರಗುವನು. ಇದನ್ನು ಆಗ ತಾನೇ ಬಂದುನೋಡಿದ ನಳಿನಳು ಭಯದಿಂದಚೀರುವಳು. ವಿಮಲೆಯು ತನ್ನ ಕೃತ್ಯದಿಂದ ತಾನೇ ಸ್ತಂಭಿತಳಾಗಿ ನಿಲ್ಲುವಳು.]

ಮತ್ತೆ ಮೌನವಾಳುವುದು.

ತೆರೆ

# ದೇವ್ರಂಗೆ ದ್ಯಾವೀನೂ

## (ಏಕಾಂಕ ದೃಶ್ಯ)



[ಕಾಲ; ಆಧುನಿಕ. ಸ್ಥಳ; ಕೆಂಚನ ಗುಡಿಸಲು. ಬಡವರ ಸರ್ವಸ್ವವಾದ ಪದಾರ್ಥಗಳೆಲ್ಲ ಒಳಗೆ ಅಲ್ಲಿ-ಇಲ್ಲಿ ಕಾಣುತ್ತವೆ. ಕೆಂಚನ ಪತ್ನಿ "ದ್ಯಾವಿ" ಅಳುತ್ತ ಕುಳಿತಿದ್ದಾಳೆ. ಕೆಂಚನು ಕಪಿಯು ಹಾಗೆ ಅವಳ ಸುತ್ತಲೂ ಓಡಾಡುತ್ತ ಸಮಾಧಾನಮಾಡಲು ಹವಣಿಸುತ್ತಿದ್ದಾನೆ.]

ಕೆಂಚ—'....ದ..... ದ....ದ....ದ್ಯಾವೀ?....'

ದ್ಯಾವಿ--(ಮೌನದಿಂದಿರುವಳು)

ಕೆಂಚ—"ಒಳ್ಳೇ ಗಾಸಾರ ಬಂದ್ ತಗಲ್ಕಂಡ್ತಲ್ಲಾ ............ಸುರ್‍ರಾ - ಬುಸ್ರಾ - ಅಂತ ಅಳ್ತಾ ಕುಂತ್ಬುಟ್ಟವ್ಳೆ.... ...ಬಡಕೊಂಡ್ರೂ ಬಾಯ್ಬಿಡಾಕಿಲ್ಲ........... ಏಸೊಂತ ಒಬ್ನೇ ಮಾತಾಡಾನಿ?...........ಯಾತ್ಕೋ ನಾನಟ್ಟೇಗ್ ಬಂದ್ಳ್ಗೆ ಚೆಂದಾಗಿಲ್ಲ....(ಯೋಚಿಸಿ, ದ್ಯಾವಿಯನ್ನೊಮ್ಮೆ ನೋಡಿ) ಆಚ್ಗೊಳ್ಗೊ ಗಳಿಗೇನಾರಾ ಚೆಂದಾಗಿರೋವಾಗ್ಲೇ ಒಂಟ್ಬುಡಾನಿ....ಇಲ್ಬಿದ್ರೆ ಮಾರಾಯ್ತಿ....ಗಾಸಾರಾ ಬುಡಸ್ಬುಡ್ತಾಳೆ....ಮೈಮೇಗೇನೀಗ ಮುನೀಸ್ವರ್ನೇ ಬಂದವ್ನೊ ಇಲ್ಲಾ ಮಾರವ್ನೋ? ಆದೆಂಗಾರ ಇರ್ಲಿ....ನನ್ನ ಮೈಮೇಗೆ ಬರೋ ಮುಂಚೇನೇ ಕಂಬೀಕಿತ್ಬುಡೋದೇ ಚೆಂದ' (ಮೆಲ್ಲನೆ ಅವಳ ಹಿಂದೆ

ಹೋಗಿ ತನ್ನ ಅಂಗಿ, ಚೌಕವನ್ನು ತೆಗೆದುಕೊಂಡು ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ಹೊರಕ್ಕೆ ಹೋಗಲೆತ್ನಿಸುತ್ತಾನೆ. ಬಾಗಿಲನ್ನು ಸೇರುವ ವೇಳೆಗೆ ದ್ಯಾವಿಯು ನೋಡಿ, ಗಟ್ಟಿಯಾಗಿ)

ದ್ಯಾವಿ—ಎಲ್ಲಿಗಾ ಓಗಾದು......?

ಕೆಂಚ—(ಬೆಚ್ಚಿನಿಂತು) .... ಮ .... ಮ .... ಮದ್ಯಾನ ಆಗ್ನಿಲ್ವಾ?.... ಮಿಶೀನು ಕೂಗೋವೊತ್ತು?.... ಕೂಲೀಗೊಂಟೆ

ದ್ಯಾವಿ—ಮಿಶೀನು ಕೂಗೋವೊತ್ತಂತೆ – ವೊತ್ತು.... .... ವೊತ್ತಾರಿಂದ ಒಲೇಗ್ಬೆಂಕೀ ಮುಟ್ಸಿಲ್ಲಾ....

ಕೆಂಚ—(ಉಗುಳು ನುಂಗಿ) ಒಲೇಗ್ಬೆಂಕೀ ಮುಟ್ಸಿಲ್ಲಾಂತ ನಂಗ್ಯಾಟ್ಸಾಕ್ಸರೂ ಮಾಡ್ಬುಟ್ಟಿಲ್ಲಾ ಮತ್ತೀಗಾ?....

ದ್ಯಾವಿ--"ಸಾಕ್ಸಂಕಿರು.... ಕಂಡನ್ರೆ.... ಗಂಜೀ ಬೇಸಾಕ್ನಾಕ್ಕಾಳಿಲ್ಲಾ ಅಟ್ಟೀಲಿ.... ವೊಟ್ಟೀಗ್ಬಟ್ಟೀಬಿಕ್ಕೊಂಡು ಕುಂತ್ಕಣೋ ವೊತ್ಬಂದ್ರೈತೆ.... ಕೈಬೀಸ್ಕೊಂಬಂದೆಲ್ಲಾ........... ಏನಾರಾ ಮಾಡ್ಕಡಗಿದ್ರೆ ಗದಕ್ಬುಟ್ಕೋಗಾನೀಂತ......

ಕೆಂಚ—ನ..... ನ.... ನ್ನಾನೇನ್ಮಾಡ್ಲಿ ದ್ಯಾವೀ......ಸಂಬಳದ್ಬಟ್ವಾಡೇನೇ ಆಗಿಲ್ಲಾ ಇನ್ನೂವೇ .....

ದ್ಯಾವಿ—ನನ್ಕೇಳ್ತದೆ ಗಂಡ್ಸು ಮಿಾಸೇ ವೊತ್ಕೊಂಡು...... 'ನಾನೇನ್ಮಾಡ್ಲೀಂತ'....

ಕೆಂಚ—(ಸ್ವಲ್ಪ ಧೈರ್‍ಯತಂದುಕೊಂಡು) 'ದ .. ದ್ಯಾವೀ........... ನನ್ಮೀಸೇ ಮೇಗ್ನಿಂಗೀಟೊಂದು ವೊಟ್ಟೂರಿ ಇದ್ರೆ.......... ಬೋಳ್ಸಾಕ್ಬುಡ್ತೀನೇಳು ಈ ಮಿಾಸೇಯ. ಸುಂಸುಂಕೆ ನನ್ಮೇಗುರುಡ್ಯಾಕಾರಾ ಬಿದ್ದೀಯಾ?...........ಉಳ್ಳೀಕಾಳುರವಂಗೆ....."

ದ್ಯಾವಿ—"ಯಾಕುರುದ್ಬೀಳಾದಾ?......ನಿನ್ನಟ್ಕಂಡಳ್ತಿರೋದ್ಕೆ ................ಪೊಟ್ಟೇಗಿಟ್ಟಿಲ್ದೆ ಇಂಗಿರಾಕಿಂತ ಸತ್ತೋರವೋ ತೀನಿ, ಎಲ್ಲಾರ ಕೆರೇಗ್ಬಿದ್ದು.....(ಅಳುವಳು)

ಕೆಂಚ—(ಗಾಬರಿಗೊಂಡು) 'ಅರಿರಿರಿರೀ......ಸಾಯೋವಂಗಿದ್ರೆ ಈಗ್ಲೇ ಎಲ್ಲಾರ ಸತ್ಗಿತ್ಬುಟ್ಟೇಯಾ......ಇನ್ನೊಸಿ ದಿನಾ ತಡ್ಕೋ ದ್ಯಾವಿ ..........ಕೈಯ್ಯಾಗ್ಕಾಸಿಲ್ಲಾ......ಬಟ್ಟಿವಡೇ ಅದ್ಕೇಕಾರಾ ಸತ್ರೆ, ನಿನ್ಮಣ್ಮಾಡಾಕ್ನಾಕ್ಕಾಸಾರಾ ಉಳ್ದಿರ್ತದೆ......"

ದ್ಯಾವಿ—(ಕೋಪಗೊಂಡು) ನಾನ್ ಸತ್ರೆ ನಿಂಗ್ಬಲು ಮೇಲಾದಾತಲ್ವಾ?......

ಕೆಂಚ—ದ್ಯಾವಿ.....ನಾನೇಳೋದು ಸುಳ್ಳುಂತಂದ್ಕೋ......ಆದ್ರೂ ನಗ್ಸಾರ್ಕೇಳ್ತೀನ್ಕೇಳೂ...........ನೀ ಸತ್ರೆ ನಂತಲೇ ಮೇಗ್ಕುಂತಿರೋ ಒಂದೊರೇ ಕಳ್ದಂಗಾಯ್ತದೆ ನೋಡು ......ನಿನ್ನಂತೋ ಎಂಡ್ತೀನ್ಸುತ್ತ್ಗಿಬ್ಕೊಳ್ಳಾಕಿಂತ ಅಗ್ಗಬಿಗ್ಕೊಂಡ್ಸಾಯೋದೇ ನಿಸೂರು ..........

ದ್ಯಾವಿ—ಅಲ್ವಾ ಮತ್ತೀಗಾ? ..........ತಿರುಗೊಂಡ್ಮಾತಾಡದ್ರೆ ನನ್ಬಾಯಾಗೊಳ್ಳೇ ಮಾತ್ಬರಾಕಿಲ್ಲಾ ನೋಡು...........

ಕೆಂಚ—ಒಳ್ಳೇ ಮಾತ್ಬರ್ದಿದ್ರೋಗ್ಲಿ ಬುಡು........... (ಮೆಲ್ಲಗೆ) ಉಗಳಾರಾ ಬತ್ತದಲ್ಲಾ ..........

ದ್ಯಾವಿ—ಕಲ್ತ್ಮಾತೆಲ್ಲಾ ಯಾಕ್ಕರ್ಚ್ ಮಾಡೀಯಾ.....ನಿನ್ಬೇಳೇಕಾಳ್ಯಾವ್ದೂ ಬೇಯಾಕಿಲ್ಲ ನಂತಾವ......ಪೋದೀಯೋನೋ ಪೋಗು...........

ಕೆಂಚ—ಆ! .....ಅದ್ಕೇನೋಡ್ ದ್ಯಾವೀ ..........ಅದ್ಕೇ ನಾನ ಟ್ಟೇಗ್ಯಾವ ಕಾಳೂ ತರ್ನಿಲ್ಲಾ ನೋಡು......... ನಿಂತಾವ ಬೇಳೇಕಾಳೇ ಬೇಯ್ದಿದ್ರೇಕೆ ಇನ್ಯಾವ್ಯಾಕಳು ಬೆಂದಾ ತೂಂತ......

ದ್ಯಾವಿ—(ಸಿಟ್ಟಿನಿಂದ) ಸಾಕು.... ವೋಗಿ ರಾಗೀ ತತ್ತಾ .......... ......ಬೇಯ್ಸಿ ಬಡೀತೀನಿ ..........

ಕೆಂಚ—ಎಲ್ಲಿಂದ ತರ್ಲೀ ದ್ಯಾವಿ.... ಆಳಾದಂಗ್ಡೀವೋನೂ ನೂವೇ ಅಳೇಬಾಕಿ ಕೊಟ್ಟೋರ್ರು ಸಾಮಾನು ಕೊಡಾಕಿ ಲ್ಲಾಂತಾನೆ..........ಇನ್ನೆಲ್ಲಿಂದ ತರ್ಲೀ?..... ........ ನೀನೇ ಯೇಳು.................

ದ್ಯಾವಿ—ಎಲ್ಲಾರೂ ತತ್ತಾ, ನಂಗೇನ್ಕೇಳ್ತೀಯಾ.....ಸಂಬ್ಳ ಬರ್ದಿದ್ರೆ ಅಂತೋತಾವೇಕ್ಯಾಕ್ರಿ ಮಾಡೀಯಾ......ಸಲೀ ಸಾಗ್ಕೊಡೋಕಡೇ ಜೀತಾಮಾಡೂ......

ಕೆಂಚ—ಊ.....ಅಂಗೇ ಆದಾತ್ಬುಡೂ..... (ಮಿರ್ಷ್ ಕೂಗು ಕೇಳಿಬರುವುದು) ...ಅಗೋ ಟೇಮಾಯ್ತು......

ದ್ಯಾವಿ—ವೋಗು

ಕೆಂಚ—ಊ......ಇನ್ನೇನೊಂಟೆ..... (ಎಂದು ಅಲ್ಲೇ ನಿಂತು, ಹಲ್ಲು ಕಿರಿಯುತ್ತ) ...ಅಂಗಾರೇ ತಿನ್ನಾಕೇನೂ ಕೊಡಾ ಕಿಲ್ವಾ .... ದ್ಯಾವೀ......?

ದ್ಯಾವಿ—ಇದ್ದರಲ್ವಾ ಕೊಡಾಕೆ.....

ಕೆಂಚ—(ಸಪ್ಪೆ ಮುಖ ಹಾಕಿಕೊಂಡು)'ಊ ...... ವೊತೀನೇಳು ವೊತ್ತಾಯ್ತು......(ಮೆಲ್ಲನೆ ಹೋಗುತ್ತ).......... ವೊಟ್ಟೆ ಅಸಿ

ತ್ರಿತ್ರ್ಯ......(ಎಂದು ಹೊಟ್ಟೆಯನ್ನು ಉಜ್ಜಿಕೊಳ್ಳುತ್ತ ಬಾಗಿಲನ್ನು ಸಮೀಪಿಸುವನು. ಆಗ ದ್ಯಾವಿಯು ಮುಗಳ್ನಗೆ ಸೂಸುತ್ತ)

ದ್ಯಾವಿ— ಬಾ ....ವೋಗ್ಲಿ......(ಎಂದು ಮೂಲೆಯಲ್ಲಿದ್ದ ಮಡಕೆಯನ್ನು ಸಮೀಪಿಸಿ, ಅದರಿಂದೆರಡು ರಾಗಿರೊಟ್ಟಿಯನ್ನು ತೆಗೆದು) (ಬಾಗಿಲಿಗೆ ಹೋಗಿ ಗಂಡನ ಕೈಲಿಟ್ಟು ಮೆಲುನಗೆ ನಗುತ್ತಲೆ) ...... ..........ದಾರಿಗೋಗ್ತಾ ತಿಂದ್ಕೊಂಡೋಗು, ವೊತ್ತಾದಾತು...........

ಕೆಂಚ—(ಕೈಲಿದ್ದ ರೊಟ್ಟಿಗಳನ್ನೂ, ಮತ್ತು ದ್ಯಾವಿಯ ಮುಖವನ್ನೂ ನೋಡಿ) ಏನೂ ಇಲ್ಲಾಂತಂದೆ?

ದ್ಯಾವಿ—ಅಂದ್ಮುಟ್ಟಿಂಕಿರಾಕಾವಾತಾ .......... ಕೂಲೀಮಾಡಾಕ್ಕೈಕಾಲ್ಗಟ್ಟಿರ್ಬೇಕಲ್ಲಾ..........ಮನೇಗೇನೂ ಇರ್ದೇವೋಗೋ ವೊತ್ಗೆ ನಿಂಗವ್ವನ್ತಾವಿಂದ ರೊಟ್ಟಿ ತಂದ್ಮಡಗ್ದೆ. ಇನ್ನೇನ್ಮಾಡ್ಲೀ..........?

ಕೆಂಚ—ನೀನೊಂದೆತ್ಕೊ ದ್ಯಾವೀ ಇದ್ರಾಗೆ.......... ನಂಗ್ಯಾ— ಕೆಳ್ಕೊ?

ದ್ಯಾವಿ—(ನಗುಮುಖದೊಡನೆ) ನನ್ಸುದ್ದೀಯಾತ್ಕೆ...... ..........ಸುಂಕೋಗ್ಯಾರ್ಡಾ....?.....ವೊತ್ತಾಯ್ತು.....

[ಕೆಂಚನು ಹೊರಡಲಿರುವನು. ಆ ವೇಳೆಗೆ ಹೊರಗಿನಿಂದ ಒಬ್ಬ ಗಂಡಸು "ಕೆಂಚಣ್ಣಾ—ಕೆಂಚಣ್ಣಾ" ಎಂದು ಕೂಗುವುದು ಕೇಳಿಬರಲು ಕೆಂಚನು ಹೆದರಿ ದ್ಯಾವಿಯ ಮುಖನೋಡಿ ಕಳೆಗುಂದಿ ನಿಲ್ಲುವನು. ದ್ಯಾವಿಯು ಇದರಿಂದ ಕೌತುಕಗೊಂಡು]

ದ್ಯಾವಿ— ಯಾಕಣ್ಣಾ....? (ಎಂದು ಕೇಳುವಳು)

ಗಂಡಸು—(ಹೊರಗಿನಿಂದಲೇ) ........ಯಾಕೂ ಇಲ್ಲವ್ವಾ.... ಕೆಂಚಣ್ಣಿಲ್ವಾ ಅಟ್ಟೀಲಿ?

ದ್ಯಾವಿ—ಇಲ್ಲಣ್ಣಾ........ಏನ್ಸದ್ದಿ?

ಗಂಡಸು—ವಾದ್ತಿಂಗಳ್ದು ಅಂಗಡೀ ಲೆಕ್ಕ ಇನ್ನಾ ಪೈಸಲ್ ಮಾಡಿಲ್ಲಾ ಕಣವ್ವಾ........ಅದ್ಕೆ ಬಾಕಿ ಕೇಳಾನಿ ಅಂತ ಬಂದೆ.

ದ್ಯಾವಿ—ಇನ್ನಾ ಸಂಬಳದ್ದಟ್ವಾಡೇನೇ ಆಗಿಲ್ಲಂತೆ ಕಣಣ್ಣಾ ........ಅಣ ಬಂದೌಸ್ರ ನಾನೇತಂದ್ಕೊಡ್ತೀನೇಳು........

ಗಂಡಸು—ಅಂಗಂದ್ರೇನವ್ವಾ?............ಈ ವೊತ್ತ್ಬೆಳಿಗ್ಗೇನೆ ಬಟ್ವಾಡೇ ಆಯ್ತಂತೆ............ಉಳ್ಡೋರೆಲ್ಲಾ ದುಡ್ತಂ ದ್ಕೊಟ್ಬುಟ್ಟೋದ್ರು............ಇಂಗೆಲ್ಲಾ ಸತಾಯ್ಸೋದು ಚೆಂದಾಅಲ್ಲ ಕಣವ್ವ........

ದ್ಯಾವಿ—(ಕೆಂಚನನ್ನೊಮ್ಮೆ ಸಂದೇಹ—ಸಿಟ್ಟಿನಿಂದ ನೋಡಿ, ತಲೆ ದೂಗಿ)....... ಓ!........ಸಂಗ್ಬಟ್ವಾಡೇ ಆದ್ಸುದ್ದೀನೆ ತಿಳ್ದಿರ್ಲಿಲ್ಲ ಕಣಣ್ಣಾ...............ಅಟ್ಟೀಗ್ಬಂದೌಸ್ರ ದುಡ್ಡೀಸ್ಕೊಂಬಂದು ನಿನ್ನಣ ಕೊಟ್ಬತ್ತೀನಿ........ಓಗಣ್ಣಾ.... (ಎಂದು ಕೆಣಕಿದ ಸರ್ಪದಂತೆ ಕೆಂಚನ ಕಡೆ ತಿರುಗುವಳು)

ಕೆಂಚ—(ಹತಾಶನಾಗಿ, ಸಿಟ್ಟುಸಿಟ್ಟು ತನ್ನಲ್ಲಿ) ಕಂಡ್ಕೊಂಬುಟ್ಳು ........ನೋಡ್ದಾ....ಕಂಡ್ಕೊಂಡೇ ಬುಟ್ಳು....

ದ್ಯಾವಿ—ಯಾಕಾ ಸುಳ್ಳೇಳಿದ್ದೂ?........

ಕೆಂಚ—....ಇ....ಇ....ಇಲ್ಲಾ ದ್ಯಾವಿ.... ನಾ....

ದ್ಯಾವಿ—ಎಲ್ಲಾ ದುಡ್ಡು?....ಸುಂಕ ತೆಗೆದ್ಮಡ್ಗು............ ಇಲ್ದಿದ್ರೆ ನಿನ್ ಜೀವ್ಗೊಳ್ಳೇದಲ್ಲಾ........

ಕೆಂಚ—ಮಡಗ್ತ್ರೀನೀಕಣ್ಮ್ರಾಯ್ತಿ ........ ಯೊಕ್ಬಡಕೊಂತ್ರೀಯಾ.... ... (ಎಂದು ವಿಷಾದದಿಂದ ತಲೆಗೆ ಸುತ್ತಿಕೊಂಡಿದ್ದ ಚೌಕದಂಚಿನ ಗಂಟು ಬಿಚ್ಚಿ ದುಡ್ಡೆಲ್ಲವನ್ನೂ ಅವಳ ಕೈಗೆ ಕುಕ್ಕುವನು)

ದ್ಯಾವಿ—ಅದ್ಯಾಕಾ ಮುಚ್ಮಡೀಕ್ಕೊಂಡಿದ್ದು?....ಆ....?

ಕೆಂಚ—(ನಿಧಾನವಾಗಿ ಮೆಲ್ಲನೆ) .............. ಅಟ್ಟೀಯೋರೆಲ್ಲ ಸೇರ್ಕೊಂಡು ಸಿವ್ರಾತ್ರೀಗೆ ಆಟಾ ಆಡ್ಬೇಕೂಂತ ಮಾಡ್ಕೊಂಡವ್ರೆ........ರಾವಣಾಯಣ್ವಾ....ಅದ್ಕೆ....

ದ್ಯಾವಿ—ಅದ್ಕೆ ಸಂಬ್ಳಾನಂತಾವ್ಕೊಡ್ಡೆ ಮುಚ್ಮಡಗ್ಬೋ.... ........?

ಕೆಂಚ—ಆಟಾ ಇನ್ನೆಂಟ್ ದಿನೀಕ್ಬೀಳ್ತದೆ....ಅದ್ಕೆ........

ದ್ಯಾವಿ—ಅದ್ಕೆ ?

ಕೆಂಚ—ಅದ್ಕೆ ಈಗ್ಲೇ ದಿರೀಸ್ ಒಲೀಸ್ಬೇಕೂಂತ........

ದ್ಯಾವಿ—ಆಟಾ ನೋಡಾಕೊಗೋನು ದಿರೀಸ್ ಒಲಿಸ್ಕೊಂಡ್ನೋಡಾಕೋಗ್ ಬೇಕಾ?

ಕೆಂಚ—ಇಲ್ಲಾ ದ್ಯಾವಿ!....ಅಟ್ಟೀಯೋರೆಲ್ಲಾ ನಂಗೆ ಇಬೀಷ್ಣನ್ ಯಾಸಾ ಕಟ್ಬುಟ್ಟಾವ್ರೆ........ಅದ್ಕೆ.......

ದ್ಯಾವಿ—ಬಂದ್ಸಂಬ್ಳಾನೆಲ್ಲಾ ಕರ್ಚ್‌ಮಾಡ್ಕಂಡು ದಿರೀಸ್ ಒಲೀಸ್ಬುಟ್ಟು ಅಂಗ್ಡೀ ಬಾಕೀಗೇನ್ಮಾಡ್ತಿದ್ದೆ?............

ಕೆಂಚ—ಇಲ್ಲಾ .....ದ್ಯಾವಿ!..........ಅಂಗ್ಡೀ ಬಾಕೀ ಪೈಸಲ್ಮಾಡ್ಬುಟ್ಟು, ಉಳ್ದಿದ್ರಲ್ಲಿ ದಿರೀಸ್ ಒಲ್ಸೋವಾಂತವಾಡಿದ್ದೆ............

ದ್ಯಾವಿ—ಅಂಗಂತವೊದ್ಲೇ ನಂತಾವೇಳಿದ್ರೆ ಬೇಡಾಂತಿದ್ನಾ ?

ಕೆಂಚ—ಸಂಬ್ಳಾ ಬಂದೌಸ್ರ ಎಳ್ಡು ಶಾಲೆ ತಗೊಂಬೇಕೂ ........ಶಾಲೇ ಇಲ್ಲಾಂತಿದ್ದೆ..........ಅದ್ಕೆ.....ನೀನ್ದು ಡ್ಕೊ ಡಾಕಿಲ್ಲಾ ನಿಂತಾವ್ಕೊಟ್ರೆ ಅಂದ್ಕೊಂಬುಟ್ಟೆ.....ಇಲ್ದಿದ್ರೆ

ದ್ಯಾವಿ—ಶಾಲೇ ಇಲ್ದಿದ್ರಿಲ್ಲಾ ..........ಇನ್ನೊಸಿದಿನಾ ತಡ್ದು ತಗೊಂಡ್ರಾಗಾಕಿಲ್ಲಾಂತದಾ.......... ವೋಗು ................ ವೊತ್ತಾಯ್ತು ಕೂಲೀಗೆ.... ಸಂಜೇಯಿಂದ ಪೇಟೇಗೋಗಿ ಬಟ್ಟೆ ತಗಂಡು ದಿರೀಸ್ ಒಲ್ಯಾಕಾಕೂವಂತೆ................

ಕೆಂಚ—(ಆಶ್ಚರ್ಯ ಚಕಿತನಾಗಿ)......... ದ್ಯಾವೀ ಅಂತೋರಿಲ್ಲ ದ್ಮನೇ ದ್ಯಾವ್ರಿಲ್ಲದ್ದು ಡೀ ಅಂಗೆ................ (ಎಂದುಕೊಳ್ಳುವನು)

ದ್ಯಾವಿ—ಓಗ್ಬಾರ್ದ್ದಾ.....ವೊತ್ತಾಯ್ತು ........... ಸಂಜೇಗ್ನಾನೇ ಒಂದಿಗ್ಬಂದು ಬಟ್ಟೆ ಕರೀದಿ ಮಾಡ್ತೀನಿ..........ಇಲ್ಲಿದ್ರೆ ನೀನ್ ಟೋಪಿಬುದ್ಬುಡ್ತೀಯಾ ...... (ಎಂದು ನಕುನಗುತ್ತ ನುಡಿಯುವಳು)

ಕೆಂಚ—(ತನ್ನಲ್ಲೇ) " ದೇವ್ರಂಗೆ ದ್ಯಾವೀನೂವೆ " ಎಂದುಕೊಂಡು ಕೈಲಿದ್ದ ರೊಟ್ಟಿಗಳನ್ನು ತಿನ್ನುತ್ತ ಹೊರಕ್ಕೆ ಹೋಗುವನು. ಅವನು ಹೋದೆಡೆಯೇ ನೋಡುತ್ತ ದ್ಯಾವಿಯು ನಿಲ್ಲುವಳು.)

(ತೆರೆಯುರುಳುವುದು)

---

"From the human spirits which embody the strivings, the hopes, the conquered failings, of the past, we may form our betterselves and build the humanity of the future".

